ಶ್ರೀ ಷಣ್ಮುಖಸ್ವಾಮಿ ಕೃತ

# ಅಖಂಡೇಶ್ವರ ವಚನಗಳು

Shant Sharma Hiremath.
"vedantacharya"

* * * *



ಪ್ರಕಾಶಕರು :

ಶ್ರೀ ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು
ಶ್ರೀ ಮುರುಘಾಮಠ
ಧಾರವಾಡ

ಪ್ರಕಾಶಕರು :

ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು

ಶ್ರೀ ಮುರುಘಾಮಠ, ಹಾವೇರಿಪೇಟೆ

ಮಠ ನಂ. ೭೬೬೮

ಧಾರವಾಡ



ಮೊದಲನೆಯ ಮುದ್ರಣ - ೧೯೪೪

ಪರಿಷ್ಕೃತ ಎರಡನೆಯ ಮುದ್ರಣ - ೧೯೫೧

ಪರಿಷ್ಕೃತ ಮೂರನೆಯ ಮುದ್ರಣ - ೧೯೫೯



ಬೆಲೆ : ರೂ. ೩.೫೦



ಮುದ್ರಕರು :

ಬಿಳಗಿ ರಾಮಣ್ಣನವರು

ಲಿಂಗರಾಜ ಆರ್ಟ ಪ್ರೆಸ್, ಮನೆ ನಂ. ೨೨೦

ಮಾಳಮಡ್ಡಿ, ಧಾರವಾಡ



ಶ್ರೀ. ನಿ. ಪ್ರ. ಸ್ವ.
ಶ್ರೀ ಮುರುಘೇಂದ್ರ ಶಿವಯೋಗಿಗಳು
ಗಚ್ಚಿನಮಠ, ಅಥಣಿ

ಶಾಂತಿಸೋಮನಾಥಹಿರೇಮಠ 11

# ಅರ್ಪಣೆ

ವಚನಶಾಸ್ತ್ರದ ಸಾರವನ್ನು ಅರಿತು, ಆಚರಿಸಿ

ಶಿವಯೋಗದ ಘನತೆಯನ್ನು ತೋರಿದ

ಪರಮ

ಮಹಾತಪಸ್ವಿಗಳೂ ವೈರಾಗ್ಯಮೂರ್ತಿಗಳೂ

ಕಾರಣಪುರುಷರೂ

ಆದ

ಅಥಣಿಯ ಗಚ್ಚಿನಮಠದ

ಲಿಂಗೈಕ್ಯ

ಶ್ರೀ. ನಿ. ಪ್ರ. ಸ್ವ.

ಶ್ರೀ. ಮುರುಘೇಂದ್ರ ಮಹಾ ಶಿವಯೋಗಿವರ್ಯರ

ಅಡಿದಾವರೆಗಳಿಗೆ

ಈ ಗ್ರಂಥಕುಸುಮವನ್ನು

ಭಕ್ತಿಯ ಮುಡಿಪೆಂದು ಅರ್ಪಿಸಲಾಗಿದೆ.

# ಪ್ರಕಾಶಕರ ಮಾತು

ಅಖಂಡೇಶ್ವರ ವಚನಗಳು ನಮ್ಮ ಸಾಹಿತ್ಯದ ಬಹು ಬೆಲೆಯುಳ್ಳ ಸೊತ್ತಾಗಿವೆ. ನಮ್ಮ ಜನತೆಯ ಹೃದಯಸಂಸ್ಕಾರಕ್ಕೆ ಅವುಗಳಿಂದ ಅಪಾರವಾದ ಸೇವೆ ಸಂದಿದೆ. ಆದುದರಿಂದ ಈ ವಚನಗಳನ್ನು ಪ್ರಕಟಿಸ ಬೇಕೆಂಬ ವಿಚಾರ ತಲೆದೋರಿ ೧೯೪೪ ನೆಯ ಇಸ್ವಿಯಲ್ಲಿ ಮೊದಲಬಾರಿ ಪ್ರಕಟಿಸಲಾಯಿತು. ಹುಬ್ಬಳ್ಳಿಯ ಶ್ರೀ. ಶ್ರೀ. ಸಿದ್ಧವೀರದೇವರು ಹೊಸಮಠ ಇವರು ಆಗ ಬಹು ಶ್ರಮವಹಿಸಿ ಅಖಂಡೇಶ್ವರ ವಚನಗಳ ಸಂಸ್ಕರಣ ಕಾರ್ಯವನ್ನು ಪೂರೈಸಿಕೊಟ್ಟರು; ಗ್ರಂಥಸಂಪಾದಕರಾಗಿ ಚಿಕ್ಕದಾದರೂ ಬೆಲೆಯುಳ್ಳ ಪ್ರಸ್ತಾವನೆಯನ್ನು ಬರೆದುಕೊಟ್ಟರು. ಈ ಗ್ರಂಥದ ಎರಡ ನೆಯ ಮುದ್ರಣವು ೧೯೫೧ ನೆಯ ಇಸ್ವಿಯಲ್ಲಿ ಅವರ ಸಂಪಾದಕತ್ವದಲ್ಲಿಯೇ ಪ್ರಕಟವಾಯಿತು. ನಮ್ಮ ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಗೆ ಶ್ರೀ ಸಿದ್ಧವೀರದೇವರಿಂದ ಸಂದ ಈ ಸೇವೆ ನಿಜವಾಗಿಯೂ ಬಹು ಸ್ತುತ್ಯವಾದುದು. ಅವರಿಗೆ ಈ ಮಾಲೆಯು ಎಂದೆಂದಿಗೂ ಋಣಿಯಾಗಿದೆ. ಶಿವಯೋಗಿಗಳವರ ಸತ್ಕೃಪೆಗೆ ಅವರು ಸದಾ ಅರ್ಹ ರೆಂದು ಹೇಳಬಯಸುತ್ತೇವೆ.

ಎರಡನೆಯ ಮುದ್ರಣದ ಪ್ರತಿಗಳೂ ಮುಗಿದು ಹೋಗಿ ಬಹಳ ದಿನಗಳಾದುವು. ಭಕ್ತರ ಹಾಗೂ ಸಾಹಿತ್ಯ ಭಕ್ತರ ಬೇಡಿಕೆ ಬಲವಾದುದ ರಿಂದ ಈ ತೃತೀಯ ಮುದ್ರಣದ ಕಾರ್ಯವನ್ನು ಕೈಕೊಳ್ಳಲಾಯಿತು. ಈ ಮುದ್ರಣದಲ್ಲಿ ಗ್ರಂಥಸಂಸ್ಕರಣ ಕಾರ್ಯ ಮಗುದೊಮ್ಮೆ ನಡೆದು ಪಾಠಾಂತರಗಳನ್ನು ಗುರುತಿಸಲಾಗಿದೆ. ಹಿಂದಿನ ಆವೃತ್ತಿಗಳಲ್ಲಿ ಪಾಠಾಂತರಗಳನ್ನೂ ಅಕಾರಾದಿ ವಚನಗಳ ಅನುಕ್ರಮಣಿಕೆಯನ್ನೂ

ಪ್ರಕಟಿಸಿರಲಿಲ್ಲ. ಆ ಕೊರತೆಯನ್ನು ಈ ಆವೃತ್ತಿಯಲ್ಲಿ ಪೂರೈಸಲಾಗಿದೆ ಯೆಂದು ತಿಳಿಸಲು ಸಂತೋಷವೆನಿಸುತ್ತದೆ. ಗ್ರಂಥಸಂಸ್ಕರಣಾದಿ ಈ ಎಲ್ಲ ಕಾರ್ಯಗಳನ್ನು ಒಳ್ಳೆಯ ಶ್ರದ್ಧೆಯಿಂದ ಪರಿಶ್ರಮಪೂರ್ವಕ ಪೂರೈಸಿ ಕೊಟ್ಟವರು ಧಾರವಾಡದ ಗಂಡುಮಕ್ಕಳ ಸರಕಾರಿ ಟ್ರೇ. ಕಾಲೇಜದ ಪ್ರಾಕ್ಟೀಸಿಂಗಸ್ಕೂಲಿನ ನಿವೃತ್ತ ಪ್ರಾಧ್ಯಾಪಕರಾದ ಶ್ರೀ ಕೆ. ಎಸ್. ಪಾಟೀಲ ಮಾಸ್ತರರು. ಮತ್ತು ವಿಸ್ತೃತವೂ ವಿವರಪೂರ್ಣವೂ ಆದ ಅಮೌಲ್ಯ ಹೊಸನುಡಿಯನ್ನು ಹೊಸೆದಿತ್ತವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಪ್ರಾಧ್ಯಾಪಕರಾದ ಡಾ. ಆರ್. ಸಿ. ಹಿರೇಮಠ ಅವರು. ಅಚ್ಚಿನ ಕಾರ್ಯವನ್ನು ಪೂರೈಸಿಕೊಟ್ಟವರು ಲಿಂಗರಾಜ ಆರ್ಟ ಪ್ರೆಸ್ಸಿನ ಒಡೆಯ ರಾದ ಬಿಳಗಿ ಬಂಧುಗಳು. ಶ್ರೀ ಶಿವಯೋಗೀಶ್ವರನು ಇವರಿಗೆಲ್ಲಾ ಸನ್ಮಂಗಲವನ್ನುಂಟುಮಾಡಲಿ.

ಜೇವರಗಿ ಷಣ್ಮುಖಶಿವಯೋಗೀಶ್ವರಮಠದ ಶ್ರೀ ನಿ. ಪ್ರ. ಸ್ವ. ಶಾಂತಲಿಂಗಸ್ವಾಮಿಗಳು ಷಣ್ಮುಖಶಿವಯೋಗಿಗಳ ಜೀವನಚರಿತೆಗೆ ಸಂಬಂಧಪಟ್ಟ ಕೆಲವು ಮಹತ್ವದ ಅಂಶಗಳನ್ನು ಸಕಾಲಕ್ಕೆ ಒದಗಿಸಿ ಮಹದುಪಕಾರಮಾಡಿರುವರು. ಅವರಿಗೆ ನಾವು ತುಂಬಾ ಋಣಿ ಯಾಗಿದ್ದೇವೆ.

ಧರ್ಮ ಮತ್ತು ಸಾಹಿತ್ಯಾಭಿಮಾನಿಗಳಾದ ಹುಬ್ಬಳ್ಳಿಯ ಶ್ರೀಮಂತ ತಮ್ಮಣ್ಣಪ್ಪನವರು ಕೌಸಳ್ಳಿ ಅವರು ಈ ಧರ್ಮಗ್ರಂಥ ಪ್ರಕಾಶನಕ್ಕೆ ೧,೦೦೧ ರೂಪಾಯಿಗಳನ್ನು ಭಕ್ತಿಯಿಂದ ಅರ್ಪಿಸಿರುವರು. ಶ್ರೀ ಶಿವ ಯೋಗೀಶ್ವರನು ಅವರಿಗೂ ಸದಾ ಸನ್ಮಂಗಲವನ್ನುಂಟು ಮಾಡಲಿ.

ಶ್ರೀ ಮುರುಘಾಮಠ,
ಧಾರವಾಡ

ಪ್ರಕಾಶಕರು

# ಪ್ರಸ್ತಾವನೆ

## ವಚನ ವಾಙ್ಮಯದ ಪ್ರವಾಹ

ವಚನ ವಾಙ್ಮಯದ ಹಾಲತೊರೆಯ ಉಗಮವು ಎಲ್ಲಿಂದ ? ಎಂದು ? ಎಂಬ ಪ್ರಶ್ನೆಗಳಿಗೆ ಇಂದಿಗೂ ನಿಚ್ಚಳವಾದ ಉತ್ತರ ದೊರೆತಿಲ್ಲ. ಸದ್ಯಕ್ಕೆ ತಿಳಿದ ಮೇರೆಗೆ ಜೇಡರ ದಾಸಿಮಯ್ಯ, ಶಂಕರ ದಾಸಿಮಯ್ಯಗಳ ಕಾಲದಲ್ಲಿ ವಚನವಾಙ್ಮಯದ ಸೆಲೆ ಹೊರಟಿದೆಯೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಆಗ ಚಿಕ್ಕ ಝರಿಯಾಗಿ ಹರಿದುಬಂದ ಈ ಸಾಹಿತ್ಯ ಬಸವಣ್ಣನ ಕಾಲದಲ್ಲಿ ಹಾಲ ತೊರೆಗೆ ಬೆಲ್ಲದ ಕೆಸರಾಗಿ, ಸಕ್ಕರೆಯ ಮಳ ಲಾಗಿ, ತವರಾಜದಂತಹ ನೊರೆ ತೊರೆಗಳಿಂದ ಹೆದ್ದೊರೆಯಾಗಿ, ರಮ್ಯವಾಗಿ ರಮಣೀಯವಾಗಿ ಹರಿಯಿತು. ಮುಂದೆ ಕೆಲವು ಶತಮಾನಗಳ ವರೆಗೆ ಆ ಪ್ರವಾಹವು ಗುಪ್ತವಾಗಿ ಸುಪ್ತವಾಗಿತ್ತೆಂದು ಕನ್ನಡಸಾಹಿತ್ಯ ಚರಿತ್ರೆ ಯಿಂದ ತಿಳಿದು ಬರುತ್ತದೆ. ಮತ್ತೆ ೧೫ ನೆಯ ಶತಮಾನದ ಮಹಾಲಿಂಗ ದೇವ, ತೋಂಟದ ಸಿದ್ಧಲಿಂಗ ಯತಿಗಳೇ ಮೊದಲಾದವರ ಕಾಲದಲ್ಲಿ ತಲೆದೋರಿ ಛಲದಿಂದ ಬಲದಿಂದ ಬೆಳೆದು ಬಾಳಿ ಬೆಳಗಿತು.

೧೬-೧೭ ನೆಯ ಶತಮಾನಗಳಲ್ಲಿ ಮತ್ತೆ ಕಣ್ಮರೆಯಾಗಿ ಒಂದು ಸಲ ಪ್ರಕಟವಾಗುತ್ತ ಮತ್ತೊಂದು ಸಲ ಗುಪ್ತವಾಗುತ್ತ ಬಂದಿದೆ.

ವೀರಶೈವ ಸಾಹಿತ್ಯ ತತ್ತ್ವಸಂಸ್ಕೃತಿಗಳಿಗೆ ಪರಧರ್ಮೀಯರಿಂದ ಆಗಾಗ ಬಂದೊದಗಿದ ವಿಪತ್ಪರಂಪರೆಗಳಿಂದ ವಚನವಾಙ್ಮಯವನ್ನು ಅಭಿಮಾನಶಾಲಿ ಗಳಾದ ನಮ್ಮ ಹಿರಿಯರು ತಮ್ಮ ಪ್ರಾಣಕ್ಕೂ ಮಿಗಿಲೆಂದು ಭಾವಿಸಿ ಬಚ್ಚಿಟ್ಟು

ಬದುಕಿಸಿದ್ದಾರೆ. ಪರಂಪರೆಯಿಂದ ಬಂದ ತತ್ತ್ವಗಳನ್ನೇ ಮತ್ತೆ ಬರೆದು ಸಾಹಿತ್ಯವನ್ನು ಬೆಳೆಸಿ, ಸಂಸ್ಕೃತಿಯನ್ನು ಉಳಿಸಿ, ತತ್ತ್ವವನ್ನು ಬೆಳಕಿಗೆ ತಂದಿದ್ದಾರೆ. ಈ ಕಾರ್ಯವನ್ನು ವಿಶೇಷವಾಗಿ ಮಠಾಧಿಕಾರಿಗಳಾದ ಸ್ವಾಮಿಗಳು ಬಹಳ ಶ್ರದ್ಧೆಯಿಂದ ಸಾಹಸಂಗೈದಿರುವುದು ಇತಿಹಾಸದಿಂದ ತಿಳಿದು ಬರುತ್ತಿದೆ.

ಆ ಪರಂಪರೆಗೆ ಸೇರಿದವರಲ್ಲಿ "ಅಖಂಡೇಶ್ವರ ವಚನ" ಕರ್ತೃಗಳಾದ ಶ್ರೀ ನಿ. ಪ್ರ ಸ್ವ. ಷಣ್ಮುಖಸ್ವಾಮಿಗಳವರು ಒಬ್ಬರು. ವಚನ ಶಾಸ್ತ್ರಕಾರರ ಶ್ರೇಣಿಯಲ್ಲಿ ಅವರಿಗೆ ಒಂದು ಉನ್ನತವಾದ ಸ್ಥಾನವಿದೆ, ಮಾನವಿದೆ, ಮನ್ನಣೆಯಿದೆ. ಇವರ ಅಖಂಡೇಶ್ವರ ವಚನವು ಇಂದಿಗೂ ಶುದ್ಧವಾದ, ಸುಂದರವಾದ ರೀತಿಯಲ್ಲಿ ಮುದ್ರಿತವಾಗಿರಲಿಲ್ಲ. ಈ ಮೊದಲು ಬಳ್ಳಾರಿಯಲ್ಲಿ ಅಚ್ಚಾಗಿದ್ದರೂ ತುಂಬ ಅಶುದ್ಧವಾಗಿ ಅಪೂರ್ಣವಾಗಿತ್ತು. ಇದನ್ನು ಕಂಡು ಶುದ್ಧವಾಗಿಯೂ ಸಮಗ್ರವಾಗಿಯೂ ಸಂಪಾದಿಸಲು, ಪರಮ ಪೂಜ್ಯರೂ ಸಮಾಜಸೇವಾಸಕ್ತರೂ ಸಾಹಿತ್ಯಾಭಿಮಾನಿಗಳೂ ಆದ ಧಾರವಾಡದ ಹಾವೇರಿಪೇಟೆಯ ಶ್ರೀ ಮುರುಘಾ ಮಠಾಧ್ಯಕ್ಷರಾದ ಶ್ರೀ ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳವರು ಅಪ್ಪಣೆ ಕೊಟ್ಟರು. ಇದೊಂದು ನನ್ನ ಸೌಭಾಗ್ಯವೆಂದು ಭಾವಿಸಿ ಸಂತೋಷದಿಂದ ಸಮ್ಮತಿಸಿದೆನು.

## ಸ್ಥಾನ ಮತ್ತು ಕಾಲ

ಅಖಂಡೇಶ್ವರ ವಚನಕರ್ತೃಗಳಾದ ಷಣ್ಮುಖಸ್ವಾಮಿಗಳವರ ನಾಡಿನ ಹಾಗೂ ವಾಸಸ್ಥಳದ ಬಗೆಗೆ ಕರ್ನಾಟಕ ಕವಿಚರಿತ್ರೆಕಾರರಾಗಲಿ, ರಾ. ಬ. ಹಳಕಟ್ಟಿಯವರಾಗಲಿ, ಇನ್ನುಳಿದ ಸಂಶೋಧಕರಾಗಲಿ ಬರೆದಂತೆ ಕಂಡುಬಂದಿಲ್ಲ. ಅವರ ಸ್ಥಾನವನ್ನು ಗೊತ್ತುಪಡಿಸಲು ಶ್ರೀಗಳವರ ಅನುಜ್ಞೆ ಪಡೆದು ಪ್ರವಾಸದ ಸೌಕರ್ಯಗಳನ್ನು ಹೊಂದಿ ನೈಜಾಂ ಪ್ರಾಂತದಲ್ಲಿ ಸಂಚರಿಸುತ್ತಿರುವಾಗ ಅಲ್ಲಿ ನಾನು ಕಂಡ ಕೆಲವು ನಿಜಾಂಶಗಳನ್ನು ಬರೆಯಲು ಬಯಸುತ್ತೇನೆ.

ಬಸವನ ನಾಡು ಕಲ್ಯಾಣಕರವಾದ ಕಲ್ಯಾಣದ ಬೀಡು. ಆ ನಾಡಿನಲ್ಲಿ ಶರಣ ಬಸವನ ಕಲಬುರ್ಗಿ ಇದೆ. ( ಈಗ ನೈಜಾಂ ರಾಜ್ಯದ ಒಂದು ಜಿಲ್ಹೆ ಗುಲಬುರ್ಗಾ ). ಅಲ್ಲಿಂದ ನೈಋತ್ಯಕ್ಕೆ ೨೫ ಮೈಲುಗಳ ಅಂತರದಲ್ಲಿ ಜೇವರಗಿ ಎಂಬ ಗ್ರಾಮವಿದೆ. ( ಈಗ ಗುಲಬುರ್ಗ ಜಿಲ್ಹೆಗೆ ಸೇರಿದ ಒಂದು ತಾಲೂಕು ) ಜೇವರಗಿ ಗ್ರಾಮದ ಪಶ್ಚಿಮ ಭಾಗವನ್ನು ಹೊಂದಿಕೊಂಡು ಷಣ್ಮುಖಸ್ವಾಮಿಗಳವರ ಹೆಸರಿನ ಒಂದು ವಿರಕ್ತಮಠವಿದೆ. ಕಲ್ಕಟ್ಟಡದಿಂದ, ವಿಶಾಲವಾದ ಅಂಗಣದಿಂದ, ಅಲ್ಲಿಯೇ ಇಳಿದು ತುಂಬುವ ವಿಸ್ತಾರವಾದ ಕಲ್ಯಾಣಿಯಿಂದ, ಗಿಡಮರಬಳ್ಳಿಗಳಿಂದ, ಇದೆಲ್ಲ ವನ್ನು ಸುತ್ತುಹಾಕಿದ ಭದ್ರವಾದ, ಉನ್ನತವಾದ ಪ್ರಾಕಾರದಿಂದ, ಉತ್ತರ ದಿಶಾಭಿಮುಖವಾದ ಉತ್ತಮ ಮಹಾದ್ವಾರದಿಂದ, ಮಠದ ಪಶ್ಚಿಮದ ಪ್ರಾಕಾರವನ್ನು ಹೊಂದಿಕೊಂಡು ದಕ್ಷಿಣದಿಂದ ಉತ್ತರಾಭಿಮುಖವಾಗಿ ಸ್ವಚ್ಛ ವಾಗಿ ಜುಳುಜುಳು ಹರಿಯುತ್ತಿರುವ ಹಿರಿದಾದ ಹಳ್ಳದಿಂದ ಆ ಮಠವು ತುಂಬ ದಿವ್ಯವಾಗಿ ಭವ್ಯವಾಗಿ ಕಣ್ಮನಗಳಿಗೆ ಮುದವ ಬೀರುವಂತಿದೆ.

ಇದೇ ಅಖಂಡೇಶ್ವರವಚನಕರ್ತೃಗಳಾದ ಷಣ್ಮುಖಸ್ವಾಮಿಗಳ ಮಠ. ಮಠದ ಗುರುಮಠದಲ್ಲಿ ಷಣ್ಮುಖಸ್ವಾಮಿಗಳವರ ಗುರುಗಳಾದ ಅಖಂಡೇಶ್ವರಸ್ವಾಮಿಗಳವರ ಗದ್ದುಗೆ ಇದೆ. ವಿಶಾಲವಾದ ಅಂಗಳದ ಮಧ್ಯಭಾಗದಲ್ಲಿ ಅಖಂಡೇಶ್ವರವಚನಕರ್ತೃಗಳಾದ ಷಣ್ಮುಖಸ್ವಾಮಿಗಳವರ ಗದ್ದುಗೆ ಇದೆ. ಗದ್ದುಗೆಯ ಕಟ್ಟಡವು ಉನ್ನತವಾದ ಶಿಖರದಿಂದ ಶೋಭಿ ಸುತ್ತಿದೆ. ಒಳಭಾಗದ ಪ್ರಾಕಾರವನ್ನು ಹೊಂದಿಕೊಂಡು ಷಣ್ಮುಖಸ್ವಾಮಿ ಗಳವರ ತರುವಾಯ ಮಠಾಧಿಕಾರಿಗಳಾಗಿ ಹೋದವರ ಗದ್ದುಗೆಗಳು ಕ್ರಮದಿಂದ ಕೆಳಗಿನ ಹೆಸರುಗಳಂತಿವೆ.

೧. ಅಖಂಡೇಶ್ವರ ಸ್ವಾಮಿಗಳು ( ಕರ್ತೃಗಳು )

೨. ಷಣ್ಮುಖಸ್ವಾಮಿಗಳು ( ವಚನ ಕರ್ತೃಗಳು )

೩. ಮರಿಷಣ್ಮುಖಸ್ವಾಮಿಗಳು

೪. ಸಿದ್ಧರಾಮ ಸ್ವಾಮಿಗಳು

೫. ರುದ್ರಮುನಿ ಸ್ವಾಮಿಗಳು

೬. ಷಣ್ಮುಖ ಸ್ವಾಮಿಗಳು

೭. ಅಯ್ಯಪ್ಪ ಸ್ವಾಮಿಗಳು

೮. ಚೆನ್ನಮಲ್ಲಿಕಾರ್ಜುನ ಸ್ವಾಮಿಗಳು

೯. ಅಖಂಡೇಶ್ವರ ಸ್ವಾಮಿಗಳು

೧೦. ನೀಲಕಂಠ ಸ್ವಾಮಿಗಳು

ಷಣ್ಮುಖಸ್ವಾಮಿಗಳವರ ಕಾಲದ ವಿಚಾರವಾಗಿ ಕವಿಚರಿತ್ರೆಕಾರರು "ಈತನು ಅಖಂಡೇಶ್ವರ ವಚನವನ್ನು ಬರೆದಿದ್ದಾನೆ. ಇವನು ವೀರಶೈವ ಕವಿ, ಇವನನ್ನು 'ಶ್ರೀಮತ್ಪರಮಹಂಸ ಪರಿವ್ರಾಜಕ ಸದ್ಗುರು ಸತ್ಸಂಪ್ರದಾಯ ಸಿದ್ಧಯೋಗೀಂದ್ರ' ಎಂದು ವಿಶೇಷಿಸಿ ಹೇಳಿದೆ. ಇವನ ಕಾಲವು ಸುಮಾರು ಕ್ರಿ. ಶ. ೧೭೦೦ ಆಗಿರಬಹುದೆಂದು ತೋರುತ್ತದೆ." ಎಂದು ಹೇಳಿದ್ದಾರೆ. ನಾವು ಅಖಂಡೇಶ್ವರ ವಚನದ ಅನೇಕ ಪ್ರತಿಗಳನ್ನು ಕಲೆಹಾಕಿ ಅವುಗಳಲ್ಲಿ ಶುದ್ಧವಾದ ನಾಲ್ಕು ಪ್ರತಿಗಳನ್ನು ಆಧಾರವಾಗಿಟ್ಟುಕೊಂಡು ಈ ಗ್ರಂಥವನ್ನು ಸಿದ್ಧಪಡಿಸಿದ್ದೇವೆ. ನಾವು ನೋಡಿದ ಯಾವ ಪ್ರತಿಗಳಲ್ಲಿಯೂ ಕವಿಚರಿತ್ರೆಯಲ್ಲಿ ಬರುವ "ಶ್ರೀಮತ್ಪರಮಹಂಸ ಪರಿವ್ರಾಜಕ ಸದ್ಗುರು ಸತ್ಸಂಪ್ರದಾಯ ಸಿದ್ಧಯೋಗೀಂದ್ರ" ಎಂಬ ವಿಶೇಷಣಗಳು ಬರುವದಿಲ್ಲ. ಮತ್ತು ಇದರೊಳಗಿನ ವಿಶೇಷಣಗಳು ವೀರಶೈವ ನಿರಂಜನಮೂರ್ತಿಗಳಿಗೆ ಅನ್ವಯಿಸುವದಿಲ್ಲ. ಆದುದರಿಂದ ಕವಿಚರಿತ್ರೆಕಾರರು ನೋಡಿದ ಪ್ರತಿಯನ್ನು ವೀರಶೈವರಲ್ಲದ ಬೇರೊಬ್ಬರು ಪ್ರತಿಮಾಡಿಕೊಂಡು ತಮ್ಮ ಸಂಪ್ರದಾಯದಂತೆ ಉದಾಹರಿಸಿರಬೇಕೆಂದು ಕಂಡುಬರುತ್ತದೆ. ಈಗ ಷಣ್ಮುಖಸ್ವಾಮಿಗಳವರ ಮಠಕ್ಕೆ ಉತ್ತರಾಧಿಕಾರಿಗಳು ಇಲ್ಲದಿರುವುದರಿಂದ ಆ ಮಠದ ಮುಖ್ಯವಾದ ಕೆಲವು ಕಾಗದ ಪತ್ರಗಳು ಮತ್ತೊಬ್ಬರ ಕೈಸೇರಿವೆ. ಆದ್ದರಿಂದ ಮಠದ ಸ್ಥಾಪನೆಯ ಮಾತ್ತು ವಚನ

ಕರ್ತೃಗಳಾದ ಷಣ್ಮುಖಸ್ವಾಮಿಗಳವರ ಜೀವಿತಕಾಲದ ನಿರ್ಣಯವನ್ನು ಮಾಡಲು ಸದ್ಯಕ್ಕೆ ಸಾಧ್ಯವಿಲ್ಲದಾಗಿವೆ.

ಅಲ್ಲಿಯ ಜನಾಂಗದ ಹೇಳಿಕೆಯ ಮೇರೆಗೆ ಮತ್ತು ನಾನು ಅಲ್ಲಿಗೆ ಹೋದಾಗ ಗೊತ್ತಾದ ಕೆಲವು ಸಂಗತಿಗಳಿಂದ ನಾನು ಯೋಚಿಸಿದ ಕಾಲವೂ ಕವಿಚರಿತ್ರೆಕಾರರು ಹೇಳುವ ಕಾಲವೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ಆಗುವದು. ಸದ್ಯಕ್ಕೆ ಕವಿಚರಿತ್ರೆಕಾರರು ಹೇಳಿರುವ ಕಾಲವನ್ನೇ (ಸುಮಾರು ಕ್ರಿ. ಶ. ೧೭೦೦) ಸಾಧುವೆಂದು ತಿಳಿದಿರಬೇಕು.

## ವಚನಕಾರನ ವ್ಯಕ್ತಿತ್ವ

ಷಣ್ಮುಖಸ್ವಾಮಿಗಳವರು ಹುಟ್ಟಿದ ನಾಡು, ಹುಟ್ಟೂರು, ತಂದೆ ತಾಯಿಗಳು ಯಾರು ? ಎಂಬ ಸಂಗತಿಗಳು ಗೊತ್ತಾಗುವಂತಿಲ್ಲ. ಅವರ ಮೂರ್ತಿ ಸ್ವರೂಪವನ್ನು ಅವರ ವಚನಗಳಿಂದ ತಿಳಿದುಕೊಳ್ಳಲು ಬರುವಂತಿದೆ. ಷಣ್ಮುಖಸ್ವಾಮಿಗಳು ಒಳ್ಳೇ ಕವಿಗಳಾಗಿ ಉತ್ತಮ ತತ್ತ್ವವೇತ್ತರಾಗಿದ್ದರು. ಕನ್ನಡ ಸಾಹಿತ್ಯವನ್ನು ಬೆಳೆಸಿ ವೀರಶೈವ ತತ್ತ್ವ ಸಂಸ್ಕೃತಿಗಳನ್ನು ಪ್ರಚಾರ ಮಾಡಿದರು. ಅವರ ವಚನಗಳಲ್ಲಿ ಅಲ್ಲಲ್ಲಿ ಆಗಮ ಉಪನಿಷತ್ ಪುರಾಣ ಧರ್ಮಶಾಸ್ತ್ರಗಳ ಪ್ರಮಾಣಗಳು ಉದಾಹರಿಸಲ್ಪಟ್ಟಿರುವುದರಿಂದ ಅವರು ಸಂಸ್ಕೃತದಲ್ಲಿಯೂ ಪಾಂಡಿತ್ಯ ವನ್ನು ಸಂಪಾದಿಸಿ ಅನೇಕ ಧರ್ಮಗ್ರಂಥಗಳನ್ನು ಅವಲೋಕನ ಮಾಡಿದ್ದ ರೆಂಧು ವ್ಯಕ್ತವಾಗುತ್ತದೆ. ಪ್ರಾಣಲಿಂಗಿಸ್ಥಲದಲ್ಲಿ ಪ್ರತಿಪಾದಿಸಿರುವ ವಚನಗಳನ್ನು ನೋಡಿದರೆ ಇವರು ಯೋಗಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸ ಮಾಡಿ ಹಠಯೋಗ ಸಾಧನೆಯಲ್ಲಿ ಧುರೀಣರಾಗಿ ಶಿವಯೋಗ ಸಾಮ್ರಾಜ್ಯ ದಲ್ಲಿ ಓಲಾಡಿರುವುದು ವೆಗ್ಗಳವಾಗಿ ವ್ಯಕ್ತವಾಗುತ್ತದೆ. ಅವರ ಭಕ್ತಿ ಜ್ಞಾನ ವೈರಾಗ್ಯಗಳ ಬಗೆಗೆ, ಕರುಣೆ, ಕಿಂಕರತೆ ಮೊದಲಾದ ಶ್ರೇಷ್ಠ ಗುಣಗಳ ಬಗೆಗೆ ಮತ್ತು ಅವರು ಶಿವಾನುಭಾವಿಗಳು ಲೋಕಾನುಭಾವಿ ಗಳು ಆಗಿದ್ದರೆಂಬ ಬಗೆಗೆ ಅವರ ವಚನಗಳೇ ಸಾಕ್ಷಿಯಾಗಿವೆ. ಷಣ್ಮುಖ-

ಸ್ವಾಮಿಗಳವರಿಗೆ ಬಸವಣ್ಣನವರೆಂದರೆ ಬಹು ಸಂತಸ. "ಬಸವಣ್ಣನೆನಗೆ ಕಾಮಧೇನು, ಬಸವಣ್ಣನೆನಗೆ ಕಲ್ಪವೃಕ್ಷ, ಬಸವಣ್ಣನೇ ಎನ್ನ ಸರ್ವ ಸಂಪತ್ತು" ಎಂತಲೂ ಬಸವಣ್ಣನ ಹಾಸಿಕೊಂಡು, ಬಸವಣ್ಣನ ಹೊದ್ದುಕೊಂಡು, ಬಸವಣ್ಣನ ಸುತ್ತಿಕೊಂಡು, ಬಸವಣ್ಣನ ಧರಿಸಿಕೊಂಡು, ನಾನು ಬಸವ ಬಸವ ಎಂದೆನುತಿರ್ದೆನಯ್ಯಾ. ಬಸವಣ್ಣನೇ ಶಿವನು, ಶಿವನೇ ಬಸವಣ್ಣ. ಶಿವಬಸವಣ್ಣರೆಂಬ ಹೆಸರಾದಡೇನು? ಅಖಂಡೇಶ್ವರ ವಸ್ತುವು ಒಂದೇ ಎಂತಲೂ ಬಸವನೇ ಭಾಗ್ಯವೆಂತಲೂ ಪಂಚ ಪ್ರಾಣವೆಂತಲೂ ಬಗೆ ಬಗೆಯಾಗಿ ಹಾಡಿ ಹರಿಸಿದ್ದಾರೆ. ಇದಲ್ಲದೆ ಮುಂದೆ ಉದಾಹರಿಸಿದ ವಚನದಿಂದ ಅವರ ಅತ್ಯಂತ ಕಿಂಕರಭಾವವು ಕಂಡು ಬರುತ್ತದೆ.

ಮಾದಾರ ಚೆನ್ನಯ್ಯನ ಬಾಯ ತಾಂಬೂಲವ ಮೆಲುವೆ
ಡೋಹರ ಕಕ್ಕಯ್ಯನ ಒಕ್ಕು ಮಿಕ್ಕುದನುಂಬೆ
ಚೋಳಿಯಕ್ಕನ ಊಳಿಗದವನಾಗುವೆ
ಶ್ವಪಚಯ್ಯನ ಆಳಾಗುವೆ
ಇನ್ನುಳಿದ ಸಕಲ ಗಣಂಗಳ ತೊತ್ತು ಬಂಟ ಲೆಂಕನಾಗಿ
ರಾಜಾಂಗಣವ ಬಳಿಯುವೆನಯ್ಯ

ಮುಂದೆ ಬರುವ ವಚನವು ಅವರ ಅತುಲವಾದ ವೈರಾಗ್ಯವನ್ನು ನಿದರ್ಶಿಸುತ್ತಿದೆ. ವಿರಾಗಿಣಿಯಾದ ಮಹದೇವಿಯಕ್ಕನ ವಚನಸರಣಿಯನ್ನೂ ಮುಪ್ಪಿನ ಷಡಕ್ಷರ ಸ್ವಾಮಿಗಳ ಹಾಡುಗಳನ್ನೂ ಜ್ಞಾಪಕಕ್ಕೆ ತರುತ್ತದೆ. "ಮಡುವಿನಗ್ಗವಣಿ, ಗಿಡದ ಹೂವು, ಒಡಲಿಗೆ ಅನ್ನ, ನುಡಿನುಡಿಗೆ ಮೃಡನ ಸ್ಮರಣೆ ಇರಲು ಜಡರ ಹಂಗೇಕೆ? ಶಿವಧ್ಯಾನ ಶಿವಚಿಂತೆ ಭಿಕ್ಷಾಹಾರ ಏಕಾಂತವಾಸಿಯ ಮಾಡು, ನಿತ್ಯ ಲಿಂಗಾರ್ಚನೆಯ ಮಾಡುತ್ತ ಸದ್ಭಕ್ತರನರಸುತ್ತ ಭಿಕ್ಷೆಬೇಡುವೆನೆಂದು ಬರುವಾಗ ಗ್ರಾಮದ ಬಾಗಿಲಲ್ಲಿ ತಡೆವಂತೆ ಮಾಡಯ್ಯ! ಆರಾರು ತಡೆಯದಿರ್ದಡೆ ಆ ಗ್ರಾಮವ ಹೊಕ್ಕು ಮನೆ ಮನೆ ಅರಸುವಂತೆ ಮಾಡಯ್ಯ! ಮನೆ ಮನೆ ತಿರಿದಡೆ ಎನ್ನ ಕಂಡು ಸರ್ವರು ಅಡ್ಡಮೋರೆಯನಿಕ್ಕುವಂತೆ ಮಾಡಯ್ಯ! ಆ ಗ್ರಾಮವ ನುಳಿದು ಮತ್ತೊಂದು ಗ್ರಾಮವನರಸಿಕೊಂಡು ಬರುವ ಬಟ್ಟೆಯಲ್ಲಿ ಜಳ

ತಗಲಿ ಕಳೆಗುಂದಿ ಮುಖಬಾಡಿ ಒಡಲೊಳಗಣ ಕ್ಷುಧಾಗ್ನಿ ಧಾವಳಿಸಿ ತನು ಸುಟ್ಟು ನಡೆವ ಗತಿಗೆಟ್ಟು ಬಲಗುಂದಿ ಧರೆಗೆ ಬೀಳುವಂತೆ ಮಾಡಯ್ಯ! ಆ ಸಮಯದಲ್ಲಿ ನಿಮ್ಮ ನೆನಹು ಮರೆದು ಜಗದ ಭೋಗವನಾಸೆಮಾಡಿದೆ ನಾದಡೆ ಅಖಂಡೇಶ್ವರಾ, ನಿಮ್ಮ ಪಾದಕ್ಕೆ ದೂರಸ್ಥನ ಮಾಡಯ್ಯ" ಈ ತೆರನಾದ ಘನತರ ವೈರಾಗ್ಯದಿಂದ ಭಕ್ತಿ ಜ್ಞಾನಗಳಿಂದ ಜಗತ್ಪಾವನವ ಮಾಡಿ ನದಿ ನದಿಯ ಕೂಡಿದಂತೆ, ಬಯಲನು ಬಯಲು ಬೆರೆದಂತೆ, ಮಾತು ಮಾತು ಕಲೆತಂತೆ, ಜ್ಯೋತಿ ಜ್ಯೋತಿ ಒಂದಾದಂತೆ ಅಖಂಡೇಶ್ವರ ಲಿಂಗದಲ್ಲಿ ಒಡವೆರೆದು ನಿಜೈಕ್ಯರಾದ ಶ್ರೀ ಷಣ್ಮುಖಸ್ವಾಮಿಗಳ ನಿಲವಿಂಗೆ ನಮೋ ನಮಃ.

## ವಚನದ ವೈಶಿಷ್ಟ್ಯ

ಇದರಲ್ಲಿ ಸ್ಥಲಕಟ್ಟುಗಳನ್ನಿಟ್ಟು ವಚನಗಳನ್ನು ಪ್ರತಿಪಾದಿಸಿದೆ. ಒಟ್ಟಿಗೆ ೭೧೭ ವಚನಗಳಿವೆ. ಇವುಗಳಲ್ಲಿ ಕೆಲವು ಪ್ರಾರ್ಥನಾರೂಪವಾದ ವುಗಳು; ಕೆಲವು ಆತ್ಮಶೋಧನೆಯ ರೂಪವಾದವುಗಳು. ಕೆಲವು ಸ್ತೋತ್ರ ರೂಪವಾದವುಗಳು; ಕೆಲವು ತತ್ತ್ವನಿರೂಪಣೆಯವು. ಕೆಲವು ಲೋಪ ದೋಷಗಳ ಖಂಡನಾತ್ಮಕವಾದುವು; ಕೆಲವು ಹಠಯೋಗ ಶಿವಯೋಗ ಪ್ರತಿಪಾದಕವಾದವುಗಳಾಗಿವೆ. ಇವುಗಳಲ್ಲಿ ಕೆಲವು ಬೆಡಗಿನ ವಚನ ಗಳೂ ಬಂದಿವೆ. ಪ್ರತಿಯೊಂದು ವಚನದ ಕೊನೆಗೆ "ಅಖಂಡೇಶ್ವರ" ಎಂಬ ಅಂಕಿತ ಬರುತ್ತಿದೆ. ಇವುಗಳಲ್ಲಿ ಪ್ರಭುದೇವರು, ಚೆನ್ನಬಸವ ದೇವರು, ಮಡಿವಾಳ ಮಾಚಿದೇವರು, ಉರಿಲಿಂಗ ಪೆದ್ದಿಗಳು, ಅಜಗಣ್ಣ, ನಿಜಗುಣಶಿವಯೋಗಿ, ಅಕ್ಕಮಹಾದೇವಿ, ಅಮ್ಮವ್ವೆ, ತಂಗಟೂರಮಾರಯ್ಯ, ಗಜೇಶಮಸಣಯ್ಯ, ಬಿಬ್ಬಿ ಬಾಚಯ್ಯ, ಬೇಡರ ಕಣ್ಣಪ್ಪ ಮೊದಲಾದವರ ಹೆಸರುಗಳು ಬಂದಿರುವುದಲ್ಲದೆ ಅವರನ್ನು ಬಹಳ ಭಕ್ತಿಯಿಂದ ಸ್ತುತಿಸಿದುದು ಕಂಡುಬರುತ್ತದೆ. ಈ ವಚನಗಳು ಹಿಂದಿನ ವಚನಕಾರರ ವಚನಗಳಿಗಿಂತಲೂ ತಿಳಿಯಾದ ಭಾಷೆಯಲ್ಲಿ ಸರಸವಾಗಿ ಸಾರರೂಪ ವಾಗಿ ಚಿತ್ರಿತವಾಗಿವೆ. ಈ ವಚನಗಳಲ್ಲಿ ವಿಶೇಷವಾಗಿ ಬಸವಣ್ಣನವರ ಅಕ್ಕಮಹಾದೇವಿಯ ವಚನಗಳಲ್ಲಿ ಬರುವ ಭಾವ ಭಾಷೆಗಳು ಬಂದಿರು

ತ್ತವೆಯಾದ್ದರಿಂದ ಆ ವಚನಗಳ ಪ್ರಭಾವವು ಈ ವಚನಕಾರರ ಮೇಲೆ ದಟ್ಟವಾಗಿ ಬಿದ್ದಿದೆಯೆಂದು ಹೇಳಬಹುದು. ಇವು ಅತಿ ಸರಸವಾಗಿ ಸರಳವಾದ ಭಾಷೆಯಿಂದ ಉತ್ತಮ ತತ್ತ್ವನಿರೂಪಣೆಯಿಂದ ಪಂಡಿತ ಪಾಮರರೆಲ್ಲರ ಆದರಕ್ಕೆ ಅಭಿಮಾನಕ್ಕೆ ಅಭ್ಯಾಸಕ್ಕೆ ಯೋಗ್ಯವಾಗಿವೆ. ಇವುಗಳನ್ನು. ವೀರಶೈವರೂ ವೀರಶೈವೇತರರೂ ಪುರವಂತಿಕೆ ಮೊದಲಾದವು ಗಳನ್ನು ಹೇಳುವಾಗ ಅನ್ನುವ ರೂಢಿ ಇದೆ. ಈ ವಚನಗಳಲ್ಲಿ ನೀತಿ ಇದೆ, ಧರ್ಮವಿದೆ, ಭಕ್ತಿ ಇದೆ, ಜ್ಞಾನವಿದೆ, ವೈರಾಗ್ಯವಿದೆ, ಹಠಯೋಗ ವಿದೆ, ಶಿವಯೋಗವಿದೆ, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರಗಳೆಂಬಷ್ಟಾವರಣಗಳ ವಿವೇಚನೆ ಇದೆ. ಸದಾಚಾರ, ಲಿಂಗಾಚಾರ (ಶಿವಾಚಾರ), ನಿಯತಾಚಾರ, ಗಣಾಚಾರ, ಭೃತ್ಯಾಚಾರಗಳೆಂಬ ಪಂಚಾಚಾರಗಳ ವಿವರವಿದೆ. ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಟ್‌ಸ್ಥಲಗಳ ಸಿದ್ಧಾಂತವಿದೆ. ಕಾವ್ಯದ ಸರ್ವ ಲಕ್ಷಣಗಳು ಕಂಡು ಬರುವುದರಿಂದ ಸಾಹಿತ್ಯವೂ ಆಗಿದೆ.

ಒಟ್ಟಾರೆ ಹೇಳುವುದಾದರೆ ಇದು ವೀರಶೈವರ ತತ್ತ್ವವನ್ನು ತಿಳಿ ಭಾಷೆಯಲ್ಲಿ ತಿಳಿಸುವ ಒಂದು ಉಪದೇಶ ಗ್ರಂಥವೆಂದೂ, ಶಿವಾನುಭವ ಶಾಸ್ತ್ರಸಾರವೆಂದೂ ಶಿವಾನುಭವ ಶಬ್ದಕೋಶವೆಂದೂ ಹೇಳಲು ಅಭ್ಯಂತರ ವಿಲ್ಲ.

ಇದರಲ್ಲಿಯ ವಚನಗಳು ಧರ್ಮವನ್ನು ಬೋಧಿಸುವುದರಿಂದ ಇದು ಧರ್ಮಗ್ರಂಥವಾಗಿದೆ; ತತ್ತ್ವಗಳನ್ನು ಬೋಧಿಸುವುದರಿಂದ ಸಿದ್ಧಾಂತ ಗ್ರಂಥವಾಗಿದೆ; ಕಾವ್ಯದ ಲಕ್ಷಣಗಳನ್ನು ಒಳಗೊಂಡಿರುವುದರಿಂದ ಉತ್ತಮ ಸಾಹಿತ್ಯಗ್ರಂಥವೂ ಆಗಿದೆ. — ಎಂದು ಎಂ. ಆರ್. ಶ್ರೀನಿವಾಸ ಮೂರ್ತಿಗಳು ಹೇಳಿರುವಂತೆ ಶ್ರೀ ಷಣ್ಮುಖಸ್ವಾಮಿಗಳವರ ಈ ಅಖಂಡೇ ಶ್ವರ ವಚನವು ಇವೆಲ್ಲ ಲಕ್ಷಣಗಳಿಂದ ಯುಕ್ತವಾಗಿದೆಯೆಂದು ಹೇಳಲು ಅನುಮಾನವಿಲ್ಲ.

## ಅಖಂಡೇಶ್ವರ ಜೋಗುಳ ಪದ

ಅಖಂಡೇಶ್ವರ ಜೋಗುಳದ ೪೧ ಪದಗಳು ದೊರೆತಿವೆ. ಇವರ್ರು ಲಿಂಗಯ್ಯನನ್ನೇ ಶಿಶುವಾಗಿ ಮಾಡಿ ತಾವೇ ತಾಯಿಯಾಗಿ ಅಂಗೈತೊಟ್ಟಿ ಲಲ್ಲಿ ಮಲಗಿಸಿ ಜೋಗುಳವ ಪಾಡುತ್ತ ತೂಗಿರುವುದನ್ನು ಲಕ್ಷಿಸಿದರೆ ಈ ಪದಗಳು ಸಾಹಿತ್ಯ ದೃಷ್ಟಿಯಿಂದ ಕವಿಕಲ್ಪನೆಯಲ್ಲಿ ಏನೂ ಕಡಿಮೆ ಯಾದವುಗಳಲ್ಲ; ಇವುಗಳಲ್ಲಿ ಶಿವಾನುಭವವನ್ನು ತೊಟ್ಟಿಲಲ್ಲಿ ತೂಗಾಡಿಸಿ ಹಾಡಿರುವಂತೆ ಭಾಸವಾಗುತ್ತದೆ. ಇದು ಕೆಳಗೆ ಕೊಟ್ಟ ವಚನದಿಂದ ತಿಳಿದು ಬರುವದು.

ನೋಡಿರೆ ನೋಡಿರೇ ಒಂದು ವಿಚಿತ್ರವ
ಶಿಷ್ಯನೆಂಬ ಹೆಂಡತಿಯ ಶ್ರೀಗುರುವೆಂಬ ಗಂಡನು
ಹಸ್ತ ಮಸ್ತಕ ಸಂಯೋಗವೆಂಬ ಕೂಟವ ಕೂಡಲು
ಷಡಕ್ಷರ ಮಂತ್ರವೆಂಬ ವೀರ್ಯವು ಚಲಸೆಯಾಗಿ
ಆ ಶಿಷ್ಯನೆಂಬ ಹೆಂಡತಿಯ ಕರ್ಣವೆಂಬ ಗರ್ಭ ಪ್ರವೇಶವಾಗಲು
ಮನ ಬಸುರಾಗಿ ಕರಣಂಗಳೆಂಬ ಯೋನಿಯಲ್ಲಿ
ಲಿಂಗವೆಂಬ ಮಗನ ಹಡೆದು ಅಂಗೈಯೆಂಬ ತೊಟ್ಟಿಲಲ್ಲಿಕ್ಕಿ
ಮಂಗಳಸೂತ್ರವೆಂಬ ಜೋಗುಳ ಹಾಡಿ
ಅಖಂಡೇಶ್ವರನೆಂಬ ಹೆಸರಿಟ್ಟರು ನೋಡಾ
ಇದು ಕಾರಣ ನೀವೀಗ ಮಗನಾದಿರಿ
ನಾ ನಿಮಗೆ ತಾಯಿಯಾದೆನಯ್ಯಾ ಅಖಂಡೇಶ್ವರಾ

ಹೀಗೆ ಲಿಂಗವನ್ನು ಆಡಿಸಿರುವ ೨-೩ ವಚನಗಳು ಚೆನ್ನಾಗಿವೆ.

ಮತ್ತು ಪ್ರಾಣಲಿಂಗಿಸ್ಥಲದ ವಚನಗಳಲ್ಲಿ ಬರುವ ಪದಭಾವಗಳು ಜೋಗುಳದಲ್ಲಿಯೂ ಬರುವುದಲ್ಲದೆ ಬಹ್ವಂಶದಿಂದ ಅವನ್ನು ಹೋಲುತ್ತವೆ.

ಇದೊಂದು ತತ್ತ್ವಮಯವಾದ ಹಾಡು. ಶರಣ ಸತಿಯರೆಲ್ಲರು ಕುರಿತು ಹಾಡುವ ಹಾಡು. ಅಂಗೈಯಲ್ಲಿ ಲಿಂಗಶಿಶುವನ್ನು ಹಿಡಿದು ಮಂಗಳಮಯವಾದ ಹಾಡು.

ಈ ಜೋಗುಳ ಪದಗಳನ್ನು ವಚನದ ಕೊನೆಗೆ ಜೋಡಿಸಲಾಗಿದೆ.

## ಶ್ರೀಗಳವರ ಶ್ರೇಷ್ಠ ಕಾರ್ಯ

ಪರಮ ಪೂಜ್ಯರೂ ಸಮಾಜ ಸೇವಾಸಕ್ತರೂ ಆದ ಧಾರವಾಡದ ಹಾವೇರಿಪೇಟೆಯ ಶ್ರೀ ಮುರುಘಾಮಠಾಧ್ಯಕ್ಷರಾದ ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯಸ್ವಾಮಿಗಳು ಯಾರು, ಎಂತಹರು — ಎಂಬುದನ್ನು ಎಲ್ಲರೂ ಬಲ್ಲರು. ಅವರು ಸಮಾಜಕ್ಕೆ ಸಲ್ಲಿಸಿರುವ, ಸಲ್ಲಿಸುತ್ತಿರುವ ಸೇವೆಯು ಅಪಾರವಾಗಿದೆ.

ಶ್ರೀಗಳವರು ದಯಾ ದಾಕ್ಷಿಣ್ಯ ವಿರತಿ ಕಿಂಕರತ್ವ ಸೌಹಾರ್ದಭಾವ ಭಕ್ತಿಭಾವ ದಾಸೋಹಂಭಾವಗಳನ್ನು, ಕಷ್ಟಸಹಿಷ್ಣುತೆ ಕಾರ್ಯದಕ್ಷತೆಗಳನ್ನು ಉಜ್ವಲವಾದ ಸಮಾಜ ಪ್ರೇಮ ಸಾಹಿತ್ಯಪ್ರೇಮ ಮೊದಲಾದ ಶ್ರೇಷ್ಠಗುಣಗಳನ್ನು ಮೈಗೂಡಿಸಿಕೊಂಡಿರುವರು. ವಿದ್ಯಾಭಿವೃದ್ಧಿಗಾಗಿ ಹಲವು ತೆರನಾದ ಮುಖದಿಂದ ಸೇವೆಯನ್ನು ಸಲ್ಲಿಸಿರುವರು. ಧಾರವಾಡದ ಶ್ರೀ ಮುರುಘಾಮಠದ ಪ್ರಸಾದ ನಿಲಯದಿಂದ ಸಮಾಜಕ್ಕೆ ತುಂಬ ಮಂಗಳವಾಗಿದೆ.

ಶ್ರೀಗಳವರು ಸಾಹಿತ್ಯದ ಅಭಿಮಾನಿಗಳಾಗಿ, ಅಭಿರುಚಿ ಉಳ್ಳವರಾಗಿ ಅದರ ಅಭಿವೃದ್ಧಿಗಾಗಿ ಹೆಣಗಾಡುತ್ತಲಿದ್ದಾರೆ. ಇದು ಕನ್ನಡಸಾಹಿತ್ಯದ ಸೌಭಾಗ್ಯವೆಂದೇ ಹೇಳಬೇಕು. ಸ್ವಾಮಿಗಳಾದವರು ಮನಸ್ಸು ಮಾಡಿದರೆ ಸಾಹಿತ್ಯವು ಬೇಗ ಪರಿಪುಷ್ಟಿಗೊಳ್ಳುತ್ತದೆಯೆಂದು ನನ್ನ ಭಾವನೆ. ಪೂರ್ವದ ಇತಿಹಾಸವನ್ನು ಅವಲೋಕಿಸಿದರೆ ಸಾಹಿತ್ಯವನ್ನು ಉಳಿಸುತ್ತ ಬೆಳೆಸುತ್ತ ಬೆಳಕಿಯಲ್ಲಿ ತಂದು ಬೆಳಗುವಂತೆ ಮಾಡಿದವರು ಸ್ವಾಮಿಗಳ ಬಳಗದವರೇ ಎಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಇಂದು ಸಾಹಿತ್ಯವನ್ನು ಬೆಳಕಿಗೆ ತರಲು ಹಂಬಲಿಸುತ್ತಿರುವ ಸ್ವಾಮಿಗಳವರಲ್ಲಿ ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯಮಹಾಸ್ವಾಮಿಗಳು ಅಗ್ರಗಣ್ಯರೆಂದು ಹೇಳಬೇಕು. ಶ್ರೀ ಮುರುಘಾಮಠಕ್ಕೆ ಉತ್ತರಾಧಿಕಾರಿಗಳಾಗಿರುವ ಶ್ರೀ ಮಹಾಂತಸ್ವಾಮಿ

ಗಳವರಾದರೂ ಗುರುಗಳ ಛಾಯಾನುವರ್ತಿಗಳಾಗಿ ಸಾಹಿತ್ಯಾಭಿಮಾನಿಗಳಾಗಿ ಸಾಹಿತ್ಯಾಭ್ಯಾಸಿಗಳಾಗಿರುವುದು ಮತ್ತು ತಮ್ಮ ಗುರುಗಳು ಕೈಕೊಂಡಿರುವ ಗ್ರಂಥ ಪ್ರಕಟನೆಯ ಪರಮ ಪವಿತ್ರ ಕಾರ್ಯಕ್ಕೆ ನೆರವಾಗುತ್ತಿರುವುದು ತುಂಬ ಸಂತೋಷದ ಸ್ತೋತ್ರಾರ್ಹವಾದ ಸಂಗತಿಯಾಗಿದೆ.

" ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆ " ಯಿಂದ ಈಗಾಗಲೇ ಮುಳಗುಂದ ಬಾಲಲೀಲಾ ಮಹಾಂತ ಶಿವಯೋಗಿಗಳ " ಕೈವಲ್ಯದರ್ಪಣ " ವು ಪ್ರಕಟವಾಗಿದೆ. ಈ " ಅಖಂಡೇಶ್ವರ ವಚನವು " ಎರಡನೆಯ ಪ್ರಕಟನೆಯು. ಇಂಥ ಬಿಕ್ಕಟ್ಟಿನ ಆರ್ಥಿಕಮುಗ್ಗಟ್ಟಿನ ಹಾಗು ಕಾಗದದ ಅಭಾವವಿರುವ ಈ ಕಾಲದಲ್ಲಿ ಗ್ರಂಥಪ್ರಕಟನೆಯ ಕಾರ್ಯವು ಒಳ್ಳೆಯ ಸಾಹಸದ ಮಾತಲ್ಲವೆ? ಇದು ತತ್ತ್ವದ ಸಂಸ್ಕೃತಿಯ ಸಮಾಜದ ಸಾಹಿತ್ಯದ ಉಜ್ವಲವಾದ ಪ್ರೇಮವಲ್ಲದೆ ಮತ್ತೇನು ?

ಶ್ರೀಗಳವರ ಅನುಕರಣವನ್ನು ಇನ್ನುಳಿದ ಮಠಾಧಿಪತಿಗಳೂ ಗ್ರಂಥ ಪ್ರಕಟನೆಯ ಕಾರ್ಯದಲ್ಲಿ ಮಾಡಿದ್ದಾದರೆ ನಮ್ಮ ಹಿರಿಯರು ತಮ್ಮ ಸರ್ವ ಸಂಪತ್ತೆಂದು ಕಾಯುತ್ತಬಂದಿರುವ ಈ ಅಪಾರವಾದ ಸಾಹಿತ್ಯವು ಬೇಗ ಬೆಳಕಿಗೆ ಬರಲು ಸಂದೇಹವಿಲ್ಲ.

## ಉಪಕಾರಿಗಳು

ಈ ಗ್ರಂಥಪ್ರಕಟನೆಯ ಕರ್ತೃಗಳಾದ ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳವರು ಇದನ್ನು ಸಮಗ್ರವಾಗಿ ಸಂಪಾದಿಸಿ ಶುದ್ಧವಾಗಿ ಸಿದ್ಧಪಡಿಸಲು ನನಗೆ ಪ್ರೇರಣೆ ಪ್ರೋತ್ಸಾಹಗಳನ್ನಿತ್ತರು. ಶ್ರೀಗಳವರ ಅನುಜ್ಞೆಯ ಮೇರೆಗೆ ಅವರಿಂದ ಉತ್ತರಾಧಿಕಾರಿಗಳಾಗಲಿರುವ ಶ್ರೀ ಮಹಾಂತ ಸ್ವಾಮಿಗಳು ಅನೇಕ ವಿಧವಾಗಿ ಸಹಾಯ ಸೌಕರ್ಯಗಳನ್ನೂ ಒಂದು ಕಾಗದದ ಹಸ್ತಲಿಖಿತ ಪ್ರತಿಯನ್ನೂ ಒದಗಿಸಿಕೊಟ್ಟಿದ್ದಾರೆ; ನನ್ನಿಂದ ಸಾಹಿತ್ಯಕ್ಕೆ ಅಲ್ಪಸೇವೆಯು ಸಲ್ಲುವ ಸುಯೋಗವು ಸಮನಿಸುವ

ಹಾಗೆ ಮಾಡಿದ್ದಾರೆ. ಈ ಮಹೋಪಕಾರಿಗಳಾದ ಉಭಯ ಶ್ರೀಗಳವರಿಗೂ ನನ್ನ ಭಕ್ತಿಭಾವದ ವಂದನೆಗಳು.

ಹಸ್ತಲಿಖಿತಪ್ರತಿಯನ್ನು ಹುಬ್ಬಳ್ಳಿಯ ಕಲ್ಯಾಣಮಠದ ಶ್ರೀ. ನಿ. ಪ್ರ. ಸ್ವ. ಬಸವಸ್ವಾಮಿಗಳವರು ಕೊಟ್ಟಿದ್ದಾರೆ. ನನ್ನ ಸ್ನೇಹಿತರಾದ ಹುಬ್ಬಳ್ಳಿಯ ರುದ್ರಾಕ್ಷಿಮಠದ ಶ್ರೀ ಶಿವಾಕ್ಷರದೇವರು ಒಂದು ಹಸ್ತಪ್ರತಿಯನ್ನು ಕೊಟ್ಟುದಲ್ಲದೆ ಅದರಲ್ಲಿರುವ ವಚನಗಳನ್ನು ಓದುವುದರಲ್ಲಿಯೂ ತುಂಬ ಸಹಾಯ ಮಾಡಿದ್ದಾರೆ. ಇವರೀರ್ವರಿಗೂ ನನ್ನ ಅಭಿವಂದನೆಗಳು.

ತೋಂಟದಾರ್ಯ ಮುದ್ರಣಾಲಯದ ಮೇಲಾಧಿಕಾರಿಗಳು ಎಲ್ಲ ಬಗೆಯಿಂದ ಸಹಾಯ ಸೌಕಾರ್ಯಗಳನ್ನು ನೀಡಿದ್ದಾರೆ. ನಾನು ಕೊಟ್ಟ ಹಲವು ತೊಂದರೆಗಳನ್ನು ತಾಳ್ಮೆಯಿಂದ ಸಹಿಸಿಕೊಂಡು ಆದರಾಭಿಮಾನಗಳಿಂದ ಈ ಗ್ರಂಥವನ್ನು ಕ್ಷಿಪ್ರದಲ್ಲಿಯೇ ಅಂದವಾಗಿಯೂ ಸುಂದರವಾಗಿಯೂ ಮುದ್ರಣಮಾಡಿಕೊಟ್ಟದ್ದಕ್ಕಾಗಿ ಅವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

೨೫, ಜನೇವರಿ ೧೯೪೪ ಸಿದ್ಧವೀರದೇವರು ಹೊಸಮಠ

# ಅರಿಕೆ

ಅಖಂಡೇಶ್ವರವಚನಗಳ ಎರಡು ಆವೃತ್ತಿಗಳು ಮುಗಿದುಹೋದುದರಿಂದ ಮೂರನೆಯ ಆವೃತ್ತಿಯನ್ನು ಪ್ರಕಟಿಸಬೇಕೆಂಬ ಪವಿತ್ರವಾದ ಸಂಕಲ್ಪ ಧಾರವಾಡದ ಶ್ರೀ. ನಿ. ಪ್ರಣವಸ್ವರೂಪಿಗಳಾದ ಮೃತ್ಯುಂಜಯ ಮಹಾಸ್ವಾಮಿಗಳವರ ಮಂಗಲಕರವಾದ ಮನದಲ್ಲಿ ಮೂಡಿತು ಅವರ ಪರಮಾಶೀರ್ವಾದದ ಬಲದಿಂದ ಕಾರ್ಯ ಆರಂಭವಾದುದಕ್ಕೆ ತಡವೇ ಆಗಲಿಲ್ಲ. ಮೂರನೆಯ ಆವೃತ್ತಿಯನ್ನು ಪಾಠಾಂತರಗಳೊಂದಿಗೆ ಪ್ರಕಟಿಸಬೇಕೆಂಬ ಹೊಸ ನಿರ್ಣಯವನ್ನೂ ಕೈಕೊಳ್ಳಲಾಯಿತು. ಅದಕ್ಕಾಗಿ ಕೆಳಗೆ ಕಾಣಿಸಿದ ಪ್ರತಿಗಳನ್ನು ಉಪಯೋಗಿಸಲಾಗಿದೆ.

(ಅ) ತಾಳೆಯೋಲೆಯ ಪ್ರತಿ ಶುದ್ಧವಾಗಿದೆ. ಪ್ರತಿಮಾಡಿದ ದಿನಾಂಕ ಉಪಲಬ್ಧವಿರದಿದ್ದರೂ ಅದು ಹಳೆಯಪ್ರತಿಯೆಂಬುದರಲ್ಲಿ ಸಂದೇಹವಿಲ್ಲ.

(ಬ) ಕಾಗದದ ಪ್ರತಿ - ಇದೂ ಶುದ್ಧವಾಗಿದೆ; ಸಮಗ್ರವಾಗಿದೆ.

(ಕ) ಕಾಗದದ ಪ್ರತಿ - ಇದು ಖಿಲವಾಗಿದೆ; ಅಶುದ್ಧವಾಗಿದೆ. ಅಪೂರ್ಣವೂ ಇದೆ.

(ಡ) ಬಳ್ಳಾರಿಯಲ್ಲಿ ಅಚ್ಚಾದ ಪ್ರತಿ - ಅಸ್ತವ್ಯಸ್ತ ಮುದ್ರಣ. ಹಾರಿಹೋದ ವಚನಗಳ ಸಂಖ್ಯೆ ಹಲವಾರು. ಪ್ರಕ್ಷಿಪ್ತವಾಗಿ ಬಂದು ಸೇರಿಕೊಂಡ ವಚನಗಳೂ ಹಲವು. ಅಶುದ್ಧತೆಗಂತೂ ಅಳತೆಯಿಲ್ಲ.

(ಇ) ಆಚ್ಚಿನ ಪ್ರತಿ - ಶ್ರೀ ಬಾಲಲೀಲಾ ಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯ ಎರಡನೆಯ ಕುಸುಮವಾಗಿ ಶ್ರೀ. ಶ್ರೀ. ಸಿದ್ಧವೀರದೇವರು ಹೊಸಮಠ, ಹುಬ್ಬಳ್ಳಿ

ಇವರಿಂದ ಸಂಪಾದಿತವಾದುದು, ಅಧಿಕೃತವಾಗಿ ಪರಿಷ್ಕರಿಸಲ್ಪಟ್ಟು ಧಾರವಾಡದ ಶೋಂಟದಾರ್ಯ ಮುದ್ರಣಾಲಯದಲ್ಲಿ ಅಂದವಾಗಿ ಅಚ್ಚಾಗಿದೆ; ಶುದ್ಧವೂ ಇದೆ.

ಈ ಐದು ಪ್ರತಿಗಳು ಈ ಹೊಸ ಆವೃತ್ತಿಯ ಪಂಚಪ್ರಾಣಗಳಿದ್ದಂತೆ. ಈ ಪ್ರತಿಗಳ ಆಧಾರದಿಂದ ಶಾಸ್ತ್ರೀಯವಾಗಿ ಸಂಸ್ಕರಿಸಿ, ಪಾಠಾಂತರಗಳನ್ನು ಗುರುತಿಸಿ ಈ ಆವೃತ್ತಿಯನ್ನು ಸಿದ್ಧಗೊಳಿಸಲಾಗಿದೆ. ಈ ಘನವಾದ ಕಾರ್ಯದಲ್ಲಿ ನನಗೆ ಶ್ರೀ ಎಸ್. ಸಿ ಹಿರೇಮಠ, ಎಮ್.ಎ.,ಎಲ್ಎಲ್.ಬಿ. ವಕೀಲ, ಧಾರವಾಡ ಇವರ ಅಮೋಘವಾದ ಸಹಾಯ ಸಂದಿದೆ.

ವಚನಗಳ ಚರಣ ವಿನ್ಯಾಸಕ್ರಮದ ವಿಷಯವಾಗಿ ಇಲ್ಲಿ ಒಂದೆರಡು ಮಾತುಗಳನ್ನು ಹೇಳಬಯಸುವೆ. ಗದ್ಯರೂಪವಾಗಿದ್ದ ವಚನಗಳನ್ನು ಅರ್ಥಸ್ಫುಟವಾಗುವಂತೆ ಅಲ್ಲಲ್ಲಿ ಆಧುನಿಕ ವಿರಾಮಚಿಹ್ನಗಳನ್ನು ಉಪಯೋಗಿಸಿ ಒಡೆಯುವ ಕ್ರಮವೊಂದು ಇತ್ತೀಚೆಗೆ ಆರಂಭವಾಗಿದೆ. ಇದೇ ಸಾಧುವಾದ ಕ್ರಮವೆಂದು ಹೇಳುವದು ದುಸ್ತರವೆನಿಸಿದ್ದರೂ ಅರ್ಥ-ವ್ಯಕ್ತಿತ್ವಕ್ಕೆ ಇದರಿಂದ ಬಹಳ ಸಹಾಯವಾಗುತ್ತದೆಯೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆದುದರಿಂದ ಈ ಅಖಂಡೇಶ್ವರ ವಚನಗಳ ಚರಣಗಳನ್ನು ಆದಷ್ಟು ಮಟ್ಟಿಗೆ ಅರ್ಥಸ್ಫುಟವಾಗುವಂತೆಯೂ ಚಿತ್ತಾಕರ್ಷಕವಾಗುವಂತೆಯೂ ವಿಂಗಡಿಸಿ ಮುದ್ರಣಕ್ಕೆ ಅಣಿಗೊಳಿಸಲು ಪ್ರಯತ್ನಿಸಿದ್ದೇನೆ ಇದಲ್ಲದೆ ಸಂದರ್ಭಸೂಚನೆಗೆ ಅನುಕೂಲವಾಗಲೆಂದು ಅಕಾರಾದಿಯಾಗಿ ವಚನಗಳ ಅನುಕ್ರಮಣಿಕೆಯನ್ನೂ ಕೊಡಮಾಡಿದ್ದೇನೆ.

ಈ ಸೇವೆಯನ್ನು ಸಲ್ಲಿಸಲು ಅವಕಾಶವನ್ನಿತ್ತು ಪ್ರೋತ್ಸಾಹಿಸಿ ಆಶೀರ್ವದಿಸಿದ ಧಾರವಾಡದ ಮುರುಘಾಮಠದ ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳವರ ಸನ್ನಿಧಿಗೆ ಅನಂತ ಪ್ರಣಾಮಗಳು.

ಕೆ. ಎಸ್. ಪಾಟೀಲ,
ನಿವೃತ್ತ ಪ್ರಾಧ್ಯಾಪಕ
ಪ್ರಾ. ಸ್ಕೂಲ ಗಂಡುಮಕ್ಕಳ ಗವ್ನ. ಟ್ರೇ. ಕಾ.
ಧಾರವಾಡ

# ಹೊಸನುಡಿ

## ಚರಿತ್ರದರ್ಶನ

ಕನ್ನಡ ಸಾಹಿತ್ಯದಲ್ಲಿ ಖ್ಯಾತಿವೆತ್ತ ಅಖಂಡೇಶ್ವರ ವಚನಗಳ ಕರ್ತೃ ಶ್ರೀ ಷಣ್ಮುಖಶಿವಯೋಗಿಗಳು. ಸಂಗ್ರಹಿಸಿದ ವಚನಗಳಲ್ಲೆಲ್ಲಿಯೂ ಷಣ್ಮುಖಶಿವಯೋಗಿಗಳವರ ಹೆಸರು ಉಲ್ಲಿಖಿತವಾಗಿರುವದಿಲ್ಲ. ಆದರೂ ಷಣ್ಮುಖಶಿವಯೋಗಿಗಳೇ ಈ ವಚನಗಳ ಕರ್ತೃವೆಂಬುದಕ್ಕೆ ಬೇರೆ ಪ್ರಮಾಣಗಳು ದೊರೆಯುತ್ತವೆ. ವಾಸ್ತವವಾಗಿ ನೋಡಿದರೆ ಬೇರೆ ಯಾವ ವಚನಕಾರರ ಗ್ರಂಥಗಳಲ್ಲಿಯೂ ಅವರವರ ಹೆಸರುಗಳು ಉಕ್ತವಾದಂತೆ ಕಂಡುಬರುವದಿಲ್ಲ.[೧] ವಚನಗಳಲ್ಲಿ ದೊರೆವುದು ಅಂಕಿತಮಾತ್ರ. ವಚನಕಾರರು ಆರಾಧ್ಯದೇವತೆಗಳ ಇಲ್ಲವೆ ಗುರುಗಳ ಹೆಸರುಗಳನ್ನು ಅಂಕಿತವಾಗಿಟ್ಟುಕೊಳ್ಳುವದುಂಟು. ಹಾಗಿದ್ದರೂ ಬೇರೆ ಪ್ರಮಾಣಗಳ ಆಧಾರದಿಂದ ಆ ಆ ವಚನಕಾರರೇ ಕರ್ತೃಗಳೆಂದು ನಿರ್ದಿಷ್ಟವಾಗಿದೆ. ಅಂಕಿತದ ಹೆಸರಿನಲ್ಲಿಯೇ ಬಹುಶಃ ಯಾರ ವಚನಗಳನ್ನೂ ಕರೆದಂತೆ ಕಂಡುಬರುವುದಿಲ್ಲ. ಬಸವಣ್ಣನವರ ವಚನಗಳನ್ನು ಕೂಡಲಸಂಗಮದೇವರ ವಚನಗಳೆಂದು ಕರೆಯಲಾಗಿಲ್ಲ. ಅಂತೆಯೇ ಪ್ರಭುದೇವರ ವಚನಗಳನ್ನು ಗೋಹೇಶ್ವರ ವಚನಗಳೆಂದು, ಮಹಾದೇವಿಯಕ್ಕನವರ ವಚನಗಳನ್ನು ಚೆನ್ನಮಲ್ಲಿಕಾರ್ಜುನದೇವರ ವಚನಗಳೆಂದು ಮುಂತಾಗಿ ಕರೆದಿರುವದಿಲ್ಲ.

---

೧. ಕೆಲವು ಅಪವಾದಗಳೂ ಉಂಟು. ಉದಾ. ಅಂಬಿಗರ ಚೌಡಯ್ಯನ ವಚನಗಳಲ್ಲಿ ಚೌಡಯ್ಯನ ಹೆಸರೇ ಬಂದುದುಂಟು.

ಆದರೆ, ಷಣ್ಮುಖಶಿವಯೋಗಿಗಳ ವಚನಗಳನ್ನು ಸಾಮಾನ್ಯವಾಗಿ ಅಖಂಡೇಶ್ವರವಚನಗಳೆಂದೇ ಕರೆಯುವ ಸಂಪ್ರದಾಯವುಂಟು. ತಾಳೆಯೋಲೆಯ ಗರಿಗಳಲ್ಲಿಯೂ ಕಾಗದದ ಪ್ರತಿಗಳಲ್ಲಿಯೂ ಈ ವಚನ ಗಳನ್ನು ಅಖಂಡೇಶ್ವರವಚನಗಳೆಂದೇ ಕರೆಯಲಾಗಿದೆ. ಇಷ್ಟೇ ಅಲ್ಲ, ನಮ್ಮಲ್ಲಿ ಬಹುಜನಪ್ರಿಯವಾದ ವಚನಗಳ ಸಾಲಿನಲ್ಲಿ ಇವು ಬರುತ್ತವೆ. ಪಂಡಿತ ಪಾಮರರೆಲ್ಲ ಇಂದಿಗೂ ಇವುಗಳನ್ನು ಅಖಂಡೇಶ್ವರವಚನ ಗಳೆಂದೇ ಕರೆಯುತ್ತಾರೆ. ಇದಕ್ಕೆ ಕಾರಣವೇನು ? ಈ ಸಂದರ್ಭದಲ್ಲಿ ಒಂದೆರಡು ಊಹೆಗಳನ್ನು ಇಲ್ಲಿ ಸಾದರಪಡಿಸಬಹುದು.

೧. ವೀರಶೈವ ಸಂಪ್ರದಾಯದಲ್ಲಿ ಶಿವದೀಕ್ಷೆಯಾದ ಬಳಿಕ ಪೂರ್ವಾಶ್ರಯನಿರಸನವಾಗಿ ಗುರುಸಂಬಂಧವೊಂದೇ ಉಳಿಯುತ್ತದೆ. ಆಗ ದೀಕ್ಷೆವಡೆದ ಶಿಷ್ಯನು ಗುರುವಿನ ಕರಕಮಲಸಂಜಾತನಾಗಿ ತನ್ನ ಕೃತಿಗಳನ್ನೆಲ್ಲ ಗುರುವಿಗೆ ಅರ್ಪಿಸುವ ಪರಂಪರೆಯುಂಟು. ಈ ಸಂಪ್ರ ದಾಯದಲ್ಲಿ ಬೆಳೆದು ಬಂದ ಶ್ರೀ ಷಣ್ಮುಖ ಶಿವಯೋಗಿಗಳು ತಮ್ಮೊಳಗಣ ಅಪಾರವಾದ ಗುರುಭಕ್ತಿಯ ಫಲವಾಗಿ ಗುರುಪ್ರೇರಣೆಯಿಂದೊರೆದ ಈ ವಚನಗಳನ್ನು ಗುರುವಿನ ವಚನಗಳೆಂದೇ ಕರೆದಿರಬಹುದು.

೨. ಸ್ವಾಭಾವಿಕವಾಗಿ ಸೌಲಭ್ಯಾಕಾಂಕ್ಷೆಯುಳ್ಳ ಜನತೆ ಅಖಂಡೇ ಶ್ವರರ ಅಂಕಿತದಲ್ಲಿ ಬರೆದ ವಚನಗಳೆನ್ನುವದಕ್ಕೆ ಪ್ರತಿಯಾಗಿ ಅಖಂಡೇಶ್ವರ ವಚನಗಳೆಂದು ಕರೆದಿರಬಹುದು.

ಇವೆರಡರಲ್ಲಿ ಮೊದಲನೆಯದು ಹೆಚ್ಚು ಸಂಭವನೀಯವಾಗಿದೆ ಯೆಂದು ನಮ್ಮ ಅಭಿಪ್ರಾಯ. ಮುಂದೆ ವಿವರಿಸಲಾಗುವ ಜೀವನ ಚರಿತೆಯ ಆಧಾರದಿಂದಲೂ ಇಂದಿಗೂ ಜನತೆ ಷಣ್ಮುಖ ಶಿವಯೋಗಿಗಳೇ

---

೧. ಹಳ್ಳಿಗಳಲ್ಲಿ ಗುಗ್ಗುಳ ಕಾಲಕ್ಕೆ ಪುರವಂತರು ಹೇಳುವ ಒಡಪುಗಳಲ್ಲಿ ಈ ವಚನಗಳನ್ನು ಜನಸಾಮಾನ್ಯರು ಅಖಂಡೇಶ್ವರವಚನಗಳೆಂದೇ ಕರೆಯುತ್ತಾರೆ.

ಇವುಗಳ ಕರ್ತೃಗಳೆಂದು ನಂಬಿರುವದರಿಂದಲೂ ಅಖಂಡೇಶ್ವರಸ್ವಾಮಿಗಳು ಸ್ವತಃ ವಚನಗಳನ್ನು ಬರೆದ ಉಲ್ಲೇಖ ವದಂತಿ ಇಲ್ಲದಿರುವದರಿಂದಲೂ ಈ ವಚನಗಳ ಕರ್ತೃ ಷಣ್ಮುಖಶಿವಯೋಗಿಗಳೆಂದು ತಿಳಿಯಲಾಗಿದೆ.[೧]

## ಜೀವನಚರಿತೆ

ಷಣ್ಮುಖಸ್ವಾಮಿಗಳು ಅಖಂಡೇಶ್ವರಸ್ವಾಮಿಗಳ ಪರಮ ಶಿಷ್ಯರು. ಅವರ ಜೀವನದ ಮೇಲೆ ಅಖಂಡೇಶ್ವರಸ್ವಾಮಿಗಳ ಪ್ರಭಾವ ವಿಶೇಷ ವಾಗಿರುವದರಿಂದ ಷಣ್ಮುಖಸ್ವಾಮಿಗಳ ಜೀವನಚರಿತೆಯನ್ನರಿವವರು ಮೊದಲು ಅಖಂಡೇಶ್ವರಸ್ವಾಮಿಗಳ ಜೀವನವೃತ್ತಾಂತವನ್ನು ತಿಳಿಯುವದು ಅವಶ್ಯವೆನಿಸಿದೆ. ಅಖಂಡೇಶ್ವರಸ್ವಾಮಿಗಳು ಈಗಿನ ಬೆಳಗಾವಿ ಜಿಲ್ಹೆಯ ಭಾಗದಿಂದ ಬಂದವರೆಂದು ಪ್ರತೀತಿಯಿದೆ.[೨] ಇವರು ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಜೀವಿಸಿರುವಂತೆ ಕಂಡುಬರುತ್ತದೆ. ಪುಣ್ಯ ಕ್ಷೇತ್ರಗಳ ದರ್ಶನಕ್ಕೆಂದು ಹೊರಟ ಅಖಂಡೇಶ್ವರಸ್ವಾಮಿಗಳು ಹೈದರಾ ಬಾದ ಪ್ರಾಂತದ ಜೇವರಗಿಯ ಹತ್ತಿರ ಬಂದು ಅಲ್ಲಿಯ ನಿಸರ್ಗ ಸೌಂದರ್ಯಕ್ಕೆ ಮನಸೋತು ಅದನ್ನೇ ತಮ್ಮ ತಪೋಭೂಮಿಯನ್ನಾಗಿ ಮಾಡಿಕೊಂಡರು. ಹರಿಯುವ ಹಳ್ಳ, ಮೆರೆಯುವ ಬೆಟ್ಟ ಇವುಗಳ ನಡುವೆ ತಪೋವನವನ್ನು ನಿರ್ಮಿಸಿಕೊಂಡರು. ಜೇವರಗಿಯ ಸುತ್ತು ಮುತ್ತಣ ಜನರೆಲ್ಲ ಮಹಾಸ್ವಾಮಿಗಳವರ ದರ್ಶನಾಶೀರ್ವಾದಗಳ ಲಾಭ ವನ್ನು ಪಡೆಯುತ್ತ ಪುನೀತರಾದರು. ಅಂತಹರಲ್ಲಿ ಷಣ್ಮುಖಸ್ವಾಮಿಗಳ ತಂದೆತಾಯಿಗಳಾದ ಮಲ್ಲಶೆಟ್ಟೆಪ್ಪ ಮತ್ತು ದೊಡ್ಡಮಾಂಬೆಯರು ಗಣ್ಯ

---

೧. ಕೇಳಿರಯ್ಯಾ ಕೇಳಿರಯ್ಯಾ..........ಷಣ್ಮುಖನೆಂಬ ಗಣೇಶ್ವರನ ಹೃದಯ ಕಮಲದಲ್ಲಿ.......(ಐಕ್ಯಸ್ಥಲ ವ ೫೮)

ಈ ವಚನದಲ್ಲಿ ಷಣ್ಮುಖಶಿವಯೋಗಿಗಳು ತಮ್ಮ ಹೆಸರನ್ನು ಧ್ವನಿಯಿಂದ ಸೂಚಿಸುವಂತಿದೆಯೆಂದು ಊಹಿಸಬಹುದಾಗಿದೆ.

೨. A Brief Life Sketch of Shri Shanmukha Shivayogi —by B. Sundareshwar P. 5.

ರಾದವರು; ಪುಣ್ಯರಾದವರು. ಅಖಂಡೇಶ್ವರಸ್ವಾಮಿಗಳ ವರಪ್ರಸಾದದಿಂದ ಈ ದಂಪತಿಗಳಿಗೆ ಕ್ರಿ. ಶ. ೧೬೩೯ ರಲ್ಲಿ (ಶಾ. ಶ. ೧೫೬೧ ಆಶ್ವಯುಜ ಬಹುಳ ಚತುರ್ದಶಿಯ ಬ್ರಾಹ್ಮೀಮುಹೂರ್ತದಂದು) ಮಗುವೊಂದು ಜನಿಸಿತು. ಅವರೇ ಷಣ್ಮುಖಶಿವಯೋಗಿಗಳು.

ಷಣ್ಮುಖಸ್ವಾಮಿಗಳ ಧಾರ್ಮಿಕವೃತ್ತಿ ವೈರಾಗ್ಯಪ್ರವೃತ್ತಿಗಳನ್ನು ಕಂಡು ಮುಗ್ಧರಾದ ಅವರ ತಂದೆತಾಯಿಗಳು ಅವರನ್ನು ಅಖಂಡೇಶ್ವರ ಸ್ವಾಮಿಗಳ ಪಾದಕ್ಕೆ ಅರ್ಪಿಸಿದರು. ಸ್ವಾಮಿಗಳು ದಿವ್ಯದರ್ಶನದಿಂದ ಮುಂಬರುವ ಮಹಾಬೆಳಗನ್ನು ಕಂಡು ಪರಮಾನಂದರಸದೊಳೋಲಾಡಿ ಅವರಿಗೆ ಜಂಗಮದೀಕ್ಷೆಯನ್ನಿತ್ತರು. ಅವರ ಆಧ್ಯಾತ್ಮಿಕ ಗುರುಗಳಾಗಿ ಶಿವಯೋಗಸಾಧನೆಯ ಮಾರ್ಗವನ್ನು ಬೋಧಿಸಿದರು. ಧರ್ಮ ತತ್ತ್ವ ಜ್ಞಾನಗಳನ್ನು ವಿವರಿಸಿದರು. ಯೋಗಸಾಧನೆ ಲಿಂಗಾರಾಧನೆಗಳಿಂದ ಷಣ್ಮುಖಶಿವಯೋಗಿಗಳು ಆತ್ಮಾನುಭವವನ್ನು ಪಡೆದುದಲ್ಲದೆ ಧರ್ಮ ಶಾಸ್ತ್ರಗ್ರಂಥಗಳನ್ನು ಆಳವಾಗಿ ಅಭ್ಯಸಿಸಿ ಅಪಾರವಾದ ಪಾಂಡಿತ್ಯವನ್ನೂ ಸಂಪಾದಿಸಿದರು. ಗುರುವಿನ ಮೆಚ್ಚುಗೆಯನ್ನೂ ಅಪ್ಪಣೆಯನ್ನೂ ಪಡೆದು ಯತಿವರ ಷಣ್ಮುಖಶಿವಯೋಗಿಗಳು ತೀರ್ಥಯಾತ್ರೆಗೆ ಹೊರಟರು. ಪುಣ್ಯಕ್ಷೇತ್ರಗಳನ್ನು ಸಂದರ್ಶಿಸಿ ನಿಸರ್ಗದ ನಿತ್ಯ ಲೀಲೆಯನ್ನು ಲಿಂಗವೆಚ್ಚು ವಂತೆ ತಣಿದು ಅಲ್ಲಿಯೂ ಶಿವಾನುಭಾವವನ್ನು ಪಡೆದರು. ಘನವಿದ್ವಾಂಸ ರನ್ನು ಸಂದರ್ಶಿಸಿ ಗಹನವಾದ ತಾತ್ವಿಕ ವಿಷಯಗಳ ಮೇಲೆ ಚರ್ಚೆ ಮಾಡಿದರು. ಅವರ ಅನುಭಾವಕ್ಕೂ ಪಾಂಡಿತ್ಯಕ್ಕೂ ಅನೇಕ ಜನರು ತಲೆದೂಗಿದರು. ಅವರನ್ನು ಕಂಡ ಭಕ್ತವೃಂದವು ಹಿರಿಹಿರಿ ಹಿಗ್ಗಿತು. ಹನ್ನೆರಡು ವರುಷ ಹೀಗೆ ಆತ್ಮಕಲ್ಯಾಣ ಲೋಕಕಲ್ಯಾಣಗಳನ್ನು ಸಾಧಿಸುತ್ತ ಬೋಧಿಸುತ್ತ ಕೊನೆಗೆ ಜೇವರಗಿಯ ಉತ್ತರಕ್ಕೆ ಆರು ಮೈಲುಗಳ ಅಂತರ ದಲ್ಲಿರುವ ಕೋಳಕೂರ ಗ್ರಾಮಕ್ಕೆ ಬಂದರು. ಆ ಗ್ರಾಮದ ನೆರೆಯಲ್ಲಿ ಭೀಮಾನದಿಯ ದಂಡೆಯ ಮೇಲಿರುವ ನಯನಮನೋಹರವಾದ ಕೊಳ್ಳ ದಲ್ಲಿ ಶಿವಯೋಗಿಗಳು ಲಿಂಗಪೂಜೆಯನ್ನೆಸಗುತ್ತ ಅಲ್ಲಿಯೇ ನೆಲೆನಿಂತರು. ಉಗ್ರವಾದ ತಪಸ್ಸನ್ನಾಚರಿಸುತ್ತ ಶಿವಾನುಭಾವದ ಮಿಂಚಿನಂತಿರುವ

ಅಖಂಡೇಶ್ವರ ವಚನಗಳನ್ನು ಅಲ್ಲಿಯೇ ಬರೆದರು. ಷಣ್ಮುಖಶಿವಯೋಗಿಗಳ ದಿವ್ಯಸಾಧನೆಯನ್ನು ಕಂಡು ಅಖಂಡೇಶ್ವರ ಸ್ವಾಮಿಗಳು ಅವರನ್ನು ಆ ಯೋಗೀಕೊಳ್ಳದಿಂದ ಜೇವರಗಿಗೆ ಬರಮಾಡಿಕೊಂಡು ಕ್ರಿ. ಶ. ೧೬೫೯ ರಲ್ಲಿ ಶೂನ್ಯಸಿಂಹಾಸನದ ಪಟ್ಟಗಟ್ಟಿದರು. ಮರುವರುಷವೇ ಕ್ರಿ. ಶ. ೧೬೬೦ ರಲ್ಲಿ ಅಖಂಡೇಶ್ವರಸ್ವಾಮಿಗಳು ಲಿಂಗೈಕ್ಯರಾದರು. ಕ್ರಿ. ಶ. ೧೬೩೧ ರಲ್ಲಿ ಅಖಂಡೇಶ್ವರ ಶ್ರೀಗಳವರಿಂದ ಸ್ಥಾಪಿತವಾದ ಈ ಪೀಠವು ಷಣ್ಮುಖ ಶಿವಯೋಗಿಗಳ ದಿವ್ಯ ಸನ್ನಿಧಾನದಿಂದ ದೇದೀಪ್ಯಮಾನವಾಗಿ ರಾರಾಜಿಸ ತೊಡಗಿತು. ಆ ಪೀಠಪರಂಪರೆ ಹೀಗಿದೆ.

೧. ಶ್ರೀ ಅಖಂಡೇಶ್ವರ ಸ್ವಾಮಿಗಳು ( ಕರ್ತೃಗಳು )
೨. ಶ್ರೀ ಷಣ್ಮುಖಶಿವಯೋಗಿಗಳು ( ವಚನ ಕರ್ತೃಗಳು )
೩. ಶ್ರೀ ಮರಿಷಣ್ಮುಖಸ್ವಾಮಿಗಳು
೪. ಶ್ರೀ ಅಪ್ಪಯ್ಯಸ್ವಾಮಿಗಳು
೫. ಶ್ರೀ ಸಿದ್ಧರಾಮಸ್ವಾಮಿಗಳು ( ಇವರ ಗದ್ದುಗೆ ಕಲ್ಬುರ್ಗಿ ಜಿಲ್ಹಾ ಕಮಲಾಪುರದಲ್ಲಿ ಇದೆ.)
೬. ಶ್ರೀ ರುದ್ರಮುನಿಸ್ವಾಮಿಗಳು (ಇವರು ಶ್ರೀಶೈಲ ಬೆಟ್ಟವನ್ನು ಸೇರಿದ್ದಾರೆ.
೭. ಶ್ರೀ ಷಣ್ಮುಖಸ್ವಾಮಿಗಳು
೮. ಶ್ರೀ ಚೆನ್ನಮಲ್ಲಿಕಾರ್ಜುನಸ್ವಾಮಿಗಳು
೯. ಶ್ರೀ ಅಖಂಡೇಶ್ವರಸ್ವಾಮಿಗಳು (ಕಿರಿಯ)
೧೦. ಶ್ರೀ ನೀಲಕಂಠಸ್ವಾಮಿಗಳು
೧೧. ಶ್ರೀ ನಿ ಪ್ರ. ಸ್ವ. ಶಾಂತಲಿಂಗಸ್ವಾಮಿಗಳು (ಸದ್ಯದ ಸ್ವಾಮಿಗಳು)

ಷಣ್ಮುಖಶಿವಯೋಗಿಗಳ ಲೋಕಸೇವೆ ಅಪ್ರತಿಮವಾದುದು. ಅಜ್ಞಾನದ ಅಂಧಕಾರದಲ್ಲಿ ಮುಳುಗಿದ ಜನತೆಗೆ ಜ್ಞಾನೋಪದೇಶಮಾಡಿ ಅವರನ್ನು ಸನ್ಮಾರ್ಗಕ್ಕೆ ಹಚ್ಚುವುದಲ್ಲದೆ ಸಮಾಜದ ಅನ್ಯಾಯದಿಂದ ಪತಿತರಾದ ಜನತೆಯ ಉದ್ಧಾರಕ್ಕೆ ಶ್ರೀಗಳು ಟೊಂಕಕಟ್ಟಿದರು. ಅಸ್ಪೃಶ್ಯರಿಗೆ

ಆತ್ಮಜ್ಞಾನದ ಬೆಳಗನ್ನು ನೀಡಿ ಲಿಂಗಧಾರಣಮಾಡಿ ಅವರ ತನುಮನಗಳನ್ನು ಶುಭ್ರಗೊಳಿಸಿದರು. ಅವರ ನುಡಿಯಂತೆ ನಡೆದು ಇಂತಹ ಅನೇಕ ಭಕ್ತರು ಪಾವನರಾದರು. ಅವರು ಗುರುಭಕ್ತಿಯ ದ್ಯೋತಕವಾಗಿ ತಮ್ಮ ಕೇರಿಯ ಮಧ್ಯದಲ್ಲಿಯೇ ಷಣ್ಮುಖಸ್ವಾಮಿಗಳಿಗೆ ಒಂದು ಮಠವನ್ನು ಕಟ್ಟಿಸಿಕೊಟ್ಟರು. ಜೇವರಗಿಯ ಹರಿಜನಕೇರಿಯಲ್ಲಿ ಆ ಮಠವನ್ನು ಈಗಲೂ ಕಾಣಬಹುದು. ಹೀಗೆ ಶ್ರೀಗಳು ಲೋಕೋದ್ಧಾರವನ್ನು ಮಾಡುತ್ತಲೆ ತಮ್ಮ ವಯಸ್ಸಿನ ೭೩ ನೆಯ ವರ್ಷದಲ್ಲಿ ಅಂದರೆ ಕ್ರಿ. ಶ. ೧೭೧೧ ರಲ್ಲಿ ಶಿವಸಾಯುಜ್ಯವನ್ನು ಹೊಂದಿದರು.[೧]

## ಅನುಭಾವದರ್ಶನ

ಷಣ್ಮುಖಶಿವಯೋಗಿಗಳು ಪರಮ ಶಿವಾನುಭಾವಿಗಳು. ಈ ಮಹಾ ಶಿವಯೋಗಿಗಳ ಅನುಭಾವಜೀವನ ಆರಂಭವಾಗುವುದು ಮನದ ಮರೆ ಯಲ್ಲಿರ್ದ ಮಹಾಘನಲಿಂಗದ ಅರಿವಾದಂದು.

ಬೀಜದ ಮರೆಯ ವೃಕ್ಷದಂತೆ ಮುಗಿಲಮರೆಯ ಮಿಂಚಿನಂತೆ[೨] ಆ ಮಹಾಘನಲಿಂಗವು ತನುಮನದಲ್ಲಿ ಸುಪ್ತವಾಗಿರುತ್ತದೆ. ಶಿವಯೋಗಿಗಳು

" ಎನ್ನ ತನುವಿನ ಮರೆಯಲ್ಲಿರ್ದ ಚಿನುಮಯನ ಅರಸುವ ಬನ್ನಿರೇ
ಎನ್ನ ಮನದ ಮರೆಯಲ್ಲಿರ್ದ ಮಹಾಘನವ ಹುಡುಕುವ ಬನ್ನಿರೇ
ಎನ್ನ ಪ್ರಾಣದ ಮರೆಯಲ್ಲಿರ್ದ ಅಖಂಡೇಶ್ವರನ ನೋಡುವ ಬನ್ನಿರೇ "

ಎಂದು ಆ ಮಹಾಘನಲಿಂಗವನ್ನು ಅರಸಿದ್ದಾರೆ. ಪೂರ್ವಸುಕೃತದಿಂದ ಅದನ್ನು ಕಂಡಿದ್ದಾರೆ. ಲಿಂಗದ ಅರುಹು ಆದಂದು ಮೊದಲುಗೊಂಡು

---

೧. ಶ್ರೀಗಳವರ ರಥೋತ್ಸವವು ಪ್ರತಿವರುಷ ವೈಶಾಖ ಬಹುಳ ಪಂಚಮಿ ತಿಥಿಗೆ ಜೇವರಗಿ ಗ್ರಾಮದಲ್ಲಿ ವೈಭವದಿಂದ ಜರಗುವದು.

೨. ಅ. ವ. ೩ ಪು.

ಸಂಸಾರದ ದಂದುಗದ ವಿಷಯವಾಗಿ ಹೇಯಭಾವನೆ ಉಂಟಾಗುತ್ತದೆ. ‘ ಈ ಸಂಸಾರದ ದಂದುಗವ ತೊಲಗಿಸಿ ನಿಮ್ಮತ್ತ ಎಳೆದುಕೊಳ್ಳಯ್ಯಾ ’ ಎಂದು ಅಖಂಡೇಶ್ವರನನ್ನು ಅನನ್ಯಭಾವನೆಯಿಂದ ಪ್ರಾರ್ಥಿಸಿದ್ದಾರೆ. ‘ ಭವಭವದಲ್ಲಿ ಎನ್ನ ತೊಳಲಿ ಬಳಲಿಸಿದ ಕಾರಣವೇನಯ್ಯಾ ’ ‘ ಸಂಸಾರ ಶರಧಿಯಲ್ಲಿ ಮುಳುಗಿಸಿ ಏಳಗೊಡದ ಕಾರಣವೇನಯ್ಯಾ ’ ಎಂದು ಕೇಳಿ ಕೊಂಡಿದ್ದಾರೆ. ಪಂಚೇಂದ್ರಿಯಗಳ ವಿಷಯವ್ಯಾಪಾರದಲ್ಲಿ ಮುಳುಗಿದ ಮನವನ್ನು ಘನದತ್ತ ಸಂಚುಗೊಳಿಸಬೇಕೆಂದು ಬಿನ್ನೈಸಿದ್ದಾರೆ. ಕುಂಡಲಿ ಯೆಂಬ ಮಾಯಾ ಸರ್ಪ ಅಧೋಮುಖವಾಗಿ ಇಂದ್ರಿಯವೆಂಬ ವಿಷವ ಕಾರುತ್ತಿರುವುದಕ್ಕೆ ಭಯಪಟ್ಟಿದ್ದಾರೆ; ಹೇಸಿಕೊಂಡಿದ್ದಾರೆ. ಮಾನವನ ಎಲ್ಲ ಅವಸ್ಥೆಗಳನ್ನು ಅರಿದು ನೋಡಿ, ಒರೆದು ನೋಡಿ ಪಿಂಡೋತ್ಪತ್ತಿಯ ನಾನಾ ಸಂಕಟಗಳನ್ನು ಕಂಡು ನಾನಂಜಿ ಮರಳಿ ಬರಲಾರೆ ಎಂದು ದೇವ ದೇವನ ಮೊರೆಹೊಕ್ಕಿದ್ದಾರೆ. ಮನವೆಂಬ ಮರ್ಕಟನನ್ನು ನಿಮ್ಮ ನೆನ ಹೆಂಬ ಪಾಶದಲ್ಲಿ ಕಟ್ಟಿ ಎನ್ನ ಉಳುಹಿಕೊಳ್ಳಯ್ಯಾ ಎಂದು ಅಖಂಡೇಶ್ವರ ನಲ್ಲಿ ಕೇಳಿಕೊಂಡಿದ್ದಾರೆ. ಹೀಗೆ ಸಂಸಾರದ ದಂದುಗವ ವಿಷಯವಾಗಿ ಹೇಯಭಾವನೆ ಉಂಟಾಗಿರಲು ಗುರುಕಾರುಣ್ಯವುಂಟಾಗುತ್ತದೆ. ಶ್ರೀಗುರುವು ಆತನ ಸ್ಥೂಲತನು ಸೂಕ್ಷ್ಮತನು ಕಾರಣತನುಗಳೆಂಬ ತನುತ್ರಯಂಗಳಲ್ಲಿ ಮುಸುಕಿದ ಆಣವಮಲ ಮಾಯಾಮಲ ಕಾರ್ಮಿಕಮಲಗಳೆಂಬ ಮಲ ತ್ರಯಂಗಳನ್ನು ಕಳೆದು ಮಾಯಾಪ್ರಕೃತಿಕಾಯದ ಪೂರ್ವಾಶ್ರಯವನ್ನು ಚಿದಗ್ನಿಯಿಂದೆ ಸುಟ್ಟು ಆತನನ್ನು ಚಿತ್ಕಾಯನನ್ನಾಗಿ ಮಾಡುತ್ತಾನೆ. ಚಿತ್ಕಾಯಸ್ವರೂಪನಾದ ಶಿಷ್ಯನ ಮಸ್ತಕದ ಮೇಲೆ ಹಸ್ತವಸಿರಿಸಿ ಪಶ್ಚಿಮ ದಿಶೆಯಲ್ಲಿ ಬೆಳಗುತ್ತಿದ್ದ ನಿತ್ಯನಿರಂಜನ ಪರಮಕಳೆಯನ್ನು ಧ್ಯಾನಿಸಿ ಕ್ರಮದಿಂದ ಭಾವಸ್ಥಲ ಮನಸ್ಥಲ ದೃಷ್ಟಿಸ್ಥಲ ಕರಸ್ಥಲಗಳಿಗೆ ತಂದು ಇಷ್ಟಲಿಂಗಧಾರಣ ಮಾಡುವನು. ಆ ಇಷ್ಟಲಿಂಗವೇ ಶಿವಯೋಗಿಗಳ ನಂಬುಗೆಗೆ ತಾಣವಾಯಿತು; ಅನಿಷ್ಟಪಂಚಕಗಳೆಂಬ ಕತ್ತಲೆಯನ್ನೋಡಿ ಸುವ ಬೆಳಗಾಯಿತು. ಹೀಗೆ ಸದ್ಗುರುವು ಶಿಷ್ಯನ ತನುವ ಶೋಧಿಸಿ ಚಿನುಮಯಲಿಂಗವ ಮಾಡಿದನು. ಮನವ ಶೋಧಿಸಿ ಘನಲಿಂಗವ ಮಾಡಿದನು. ಭಾವವ ಶೋಧಿಸಿ ಭಾವಭರಿತಲಿಂಗವ ಮಾಡಿದನು.

ಅಂಗಕರಣಗಳ ಕಳೆದು ಲಿಂಗಕರಣಗಳ ಮಾಡಿದನು. ಕರಸ್ಥಲದಲ್ಲಿ ತಾನೇ ಲಿಂಗಮೂರ್ತಿಯಾಗಿ ನೆಲೆಗೊಂಡನು. ಜಿಹ್ವಾಸ್ಥಲದಲ್ಲಿ ಮಂತ್ರ ಮೂರ್ತಿಯಾಗಿ ನೆಲೆಗೊಂಡನು. ಗುರುಕೊಟ್ಟ ಲಿಂಗವನ್ನು ಶಿವಯೋಗಿ ಗಳು ಭಕ್ತಿಭಾವನೆಯಿಂದ ಆರಾಧಿಸತೊಡಗಿದರು.

ನಂದಿವಾಹನನಾಗಿ ಚಂದ್ರಸೂರ್ಯಾಗ್ನಿನೇತ್ರದ ಅಂದ ಉಳ್ಳಾತನಾಗಿ
ಸಂದಣಿಯಾಗಿ ನೆರೆದ ಪ್ರಮಥಗಣವೃಂದ ಉಳ್ಳಾತನಾಗಿ
ನಿಂದು ಓಲೈಸುವ ದೇವಸಭೆಯ ಮುಂದೆ ಉಳ್ಳಾತನಾಗಿ
ದುಂದುಭಿಯ ನಾದ ಮೊಳಗುತ್ತ ಕಂದರ್ಪನ ಕೋಟಿಸೌಂದರ್ಯವ
ನೊಳಕೊಂಡು ಬಂದಿರಯ್ಯ ಎನ್ನ ಕರಸ್ಥಲಕ್ಕೆ
ಅಖಂಡೇಶ್ವರಾ

ಪಂಚಮುಖ ದಶಪಂಚನೇತ್ರ ದಶಭುಜ ಎಸೆವ ಕೆಂಜೆಡೆಗಳ
ಶಶಿಮೌಳಿ ದಶದಿಗ್ಭರಿತ ಅಗ್ರಗಣ್ಯ ಅಗೋಚರ ವ್ಯಾಘ್ರಚರ್ಮಾಂಬರ
ಭರ್ಗೋದೇವನೆನಿಸಿ ಬಂದಿರಯ್ಯ ಎನ್ನ ಕರಸ್ಥಲಕ್ಕೆ
ಅಖಂಡೇಶ್ವರಾ

ಹರಿನಯನವ ಚರಣಕಮಲದಲ್ಲಿ ಧರಿಸಿ
ಶಿರಮಕುಟದಲ್ಲಿ ಹರಿವ ಗಂಗೆಯ ತಾಳಿ
ಅಸುರರ ಶಿರಗಳ ಕೊರಳ ಹಾರವ ಮಾಡಿ
ಅಜಶಿರಪಾತ್ರವ ಕರದ ಮಧ್ಯದೊಳಗಿರಿಸಿ
ಗಜಚರ್ಮಾಂಬರ ಭುಜಗಭೂಷಣನೆನಿಸಿ
ತ್ರಿಜಗವ ಪಾಲಿಸುತ್ತ ಬಂದಿರಯ್ಯ ಎನ್ನ ಕರಸ್ಥಲಕ್ಕೆ
ಅಖಂಡೇಶ್ವರಾ

ವಿಶ್ವತೋ ಮುಖ ವಿಶ್ವತೋ ಪಾದ
ವಿಶ್ವತೋ ಬಾಹು ವಿಶ್ವತೋ ಚಕ್ಷು
ವಿಶ್ವತೋ ವ್ಯಾಪಕನೆನಿಸಿ ಬಂದಿರಯ್ಯ ಎನ್ನ ಕರಸ್ಥಲಕ್ಕೆ
ಅಖಂಡೇಶ್ವರಾ

ಎಂದು ಕರಸ್ಥಲದಲ್ಲಿ ಚುಳುಕಾದ ಲಿಂಗದೇವನನ್ನು ಕುರಿತು ಹಾಡಿ ಕೊಂಡಾಡಿದರು. ಬಾರಯ್ಯಾ ಅಖಂಡೇಶ್ವರಾ ಎನ್ನ ಪರಮ ಹೃದಯ ಮಂದಿರಕ್ಕೆ ಎಂದು ಪ್ರಾರ್ಥಿಸಿದರು. ಲಿಂಗದ ಕಡೆಗೆ ಮನಸ್ಸು ಹರಿಯು ತ್ತಿದ್ದರೂ ಅದು ಇನ್ನೂ ಇಮ್ಮನವಾಗಿದೆ. ಕರ್ಮದ ವಿಧಿಯ ಕಾಟ! ಆ ಇಮ್ಮನವಳಿದು ಒಮ್ಮನವಾಗಬೇಕೆಂದು ಶಿವಯೋಗಿಗಳ ಹಾರೈಕೆ. ನುಡಿಯಲ್ಲಿ ಕರ್ಕಶವಿಲ್ಲದೆ, ನಡೆಯಲ್ಲಿ ಬೇಸರವಾಗದೆ ಹಿಡಿದ ಭಕ್ತಿಯ ಕಡೆತನಕ ಬಿಡದೆ ಮುಂದೆ ಸಾಗಬೇಕೆಂದು ನಿರ್ಧರಿಸುವರು. ಆದರೆ, ಭಕ್ತಿಮಾರ್ಗ ಬಹುದುಸ್ತರವಾದುದು. ಭಕ್ತಿಯೆಂಬುದು ಕರಗಸದಂತೆ ಹೋಗುತ್ತ ಕೊಯ್ಯುವದು; ಬರುತ್ತ ಕೊಯ್ಯುವದು. ಭಕ್ತನಾದವನು ಉಭಯ ಸೆಳೆತಕ್ಕೆ ಸಿಲುಕಿ ನುಗ್ಗುನುಗ್ಗಾಗುವನು. ಪ್ರಪಂಚದ ಎಳೆತ ವೇನು ಸಾಮಾನ್ಯವೇ?

ಹೊರಗೆ ಹೊನ್ನು ಬಿಟ್ಟೆನೆಂದು ನುಡಿವುತಿರ್ಪನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು
ಹೊರಗೆ ಹೆಣ್ಣು ಬಿಟ್ಟೆನೆಂದು ನುಡಿವುತಿರ್ಪನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು
ಹೊರಗೆ ಮಣ್ಣು ಬಿಟ್ಟೆನೆಂದು ನುಡಿವುತಿರ್ಪನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು

ಎಂದು ಶಿವಯೋಗಿಗಳು ಅಂತರಂಗವನ್ನು ಮುಸುಕಿದ ಮಾಯಾಮೋಹ ವನ್ನು ತೀಕ್ಷ್ಣವಾಗಿ ನಿರೀಕ್ಷಿಸಿರುವರು. ಅನುಭಾವ ಮಾರ್ಗಕ್ಕೆ ಅಂತ ರಂಗನಿರೀಕ್ಷಣೆ ಅತ್ಯವಶ್ಯವಾದುದು. ಇಂತಹ ನಿರೀಕ್ಷಣೆಯಿಲ್ಲದೆ ಆತ್ಮೋನ್ನತಿಯಾಗಲಾರದು. ಶಿವಯೋಗಿಗಳ ಆತ್ಮನಿರೀಕ್ಷಣೆ ಅದ್ಭುತ ವಾಗಿದೆ.

ಎನ್ನ ತನುವು ನಿಮ್ಮ ಚರಣವ ಪೂಜಿಸಲೊಲ್ಲದೆ
ಹಸಿವು ತೃಷೆಯಲ್ಲಿ ಹತವಾಗುತಿರ್ಪುದು.

ಎನ್ನ ಮನವು ನಿಮ್ಮ ದಿವ್ಯನಾಮವ ನೆನೆಯಲೊಲ್ಲದೆ
ಬಿನುಗು ವಿಷಯಕ್ಕೆ ಹರಿಯುತಿಪ್ಪುದು.

ಹೀಗೆ ಪ್ರಪಂಚದತ್ತ ಓಡಾಡುತ್ತಿರುವ ಮನವನ್ನು ಶಿವಯೋಗಿಗಳು ಹಡಿಕೆಯ ನೆನಸಿ ಹಾಳಗೇರಿಗೆ ಹೋಗುವ ಹಂದಿಗೆ ಹೋಲಿಸಿದ್ದಾರೆ. ಆಸೆ ಮೊಳೆದೋರಿ ಮತ್ತೆ ಮತ್ತೆ ಬೇಕೆಂದು ಬೇಡಿ ಮನ ಕಿರಿದಾಗುತ್ತದೆ. ನುಡಿಯಲ್ಲಿ ಉಪಾಧಿಕೆ ಮೊಳೆದೋರುತ್ತಿದೆ. ಈ ತ್ರಿಕರಣದಲ್ಲಿ ಶುದ್ಧವಿಲ್ಲ ವೆಂದು ಹಂಬಲಿಸುವರು. ನುಡಿಹೀನ ನಡೆತಪ್ಪುಗ ಜಡದೇಹಿ ದುರ್ಗುಣಿ ದುರಾಚಾರಿಯೆಂದು ನಾನಾಬಗೆಯಾಗಿ ತಮ್ಮನ್ನು ತಾವು ಕಠೋರವಾಗಿ ಖಂಡಿಸಿರುವರು.

ಆಸೆವಿಡಿದು ಹಲವು ದೇಶಕ್ಕೆ ಹರಿದಾಡಿದೆನಲ್ಲದೆ
ನಿರಾಸೆವಿಡಿದು ನಿಜವಿರಕ್ತನಾಗಿ ಚರಿಸಲಿಲ್ಲವಯ್ಯ ನಾನು.
ವೇಷಾಡಂಬರದಲ್ಲಿ ಅಧಿಕನೆನಿಸಿ ಲೌಕಿಕ ಮೆಚ್ಚಿ ನಡೆದೆನಲ್ಲದೆ
ಭಾಷೆಯಲ್ಲಿ ಅಧಿಕನೆನಿಸಿ ಲಿಂಗಮೆಚ್ಚಿ ನಡೆಯಲಿಲ್ಲವಯ್ಯ ನಾನು.
ಮಾತಿನಲ್ಲಿ ವಿರಕ್ತನೆಂದು ಠಕ್ಕುತನದ ಠೌಳುಗಾರಿಕೆಯ
ಸುಳ್ಳನೇ ನುಡಿದೆನಲ್ಲದೆ
ಮನದಲ್ಲಿ ಸರ್ವಸಂಗ ಪರಿತ್ಯಾಗಿಯಾದ ಪರಮ
ವಿರಕ್ತನಲ್ಲವಯ್ಯ ನಾನು.

ಹೀಗೆ ಅಸಹಾಯನಾದ ಭಕ್ತನು ಪರಮಾತ್ಮನನ್ನು ಮೊರೆಹೊಗದೆ ಗತ್ಯಂತರ ವಿಲ್ಲದಾಗಿದೆ. ಸತಿಯಿದ್ದ ಮನೆಗೆ ಪತಿಯೊಲಿದು ಬರುವಂತೆ ನೀವೇ ಒಲಿದು ಬಂದು ಎನ್ನ ತನು ಮನ ಧನದಲ್ಲಿ ಭರಿತನಾಗಯ್ಯಾ ಅಖಂಡೇಶ್ವರಾ ಎಂದು ಪ್ರಾರ್ಥಿಸುವರು. ಶಿವನಡೆ ಶಿವನುಡಿ ಶಿವನೋಟ ಶಿವಭಾವ ಶಿವಾಚಾರ ಶಿವಭಕ್ತಿ ಶಿವಜ್ಞಾನ ಶಿವಾನುಭಾವ ಶಿವಶರಣರ ಸಂಗ ಇವನೆ ಕರುಣಿಸಿ ಬದುಕಿಸಯ್ಯ ಎನ್ನ. ಎಂದು ಅನನ್ಯಭಾವದಿಂದ ಬೇಡಿಕೊಳ್ಳುವರು. ಭಕ್ತನ ಕರೆಗೆ ಲಿಂಗತಂದೆ ಓಗುಡುವನು. ಆತನ

ಪ್ರಸಾದ ಈತನ ಭಕ್ತಿ ಬಲಿದಂತೆ ಹೆಚ್ಚಾಗುತ್ತ ಹೋಗುವದು. ಲಿಂಗ ಪೂಜೆಯ ಮಹಿಮೆಯೇ ಅಂತಹದು !

ಘನತರದಿಷ್ಟಲಿಂಗದಲ್ಲಿ ಅನಿಮಿಷದೃಷ್ಟಿ ಬಲಿದು
ಮನಕರಗಿ ತನುಉಬ್ಬಿ ಹೃದಯಕಮಲ ಪಸರಿಸಿ
ಸರ್ವಾಂಗವೂ ಗುಡಿಗಟ್ಟಿ ಕಂಗಳಲ್ಲಿ ಪರಿಣಾಮಜಲವುಕ್ಕಿ
ಹೊರಸೂಸುತ್ತ
ಪರಮ ಕಾಷ್ಠೆಯಂತೆ, ಚಿತ್ರದ ರೂಹಿನಂತೆ

ಪರಬ್ರಹ್ಮಲಿಂಗದಲ್ಲಿ ಬೆರೆದು ಬೇರಿಲ್ಲದಂತಹ ಭಕ್ತಿಯಿಂದ ಲಿಂಗಾರಾಧನೆ ಮಾಡುವರು. ಭಕ್ತಿ ನಿಜವಾಗಿಯೂ ಬಲಗೊಳ್ಳುವದು. ಹಾಡಿದರೆ ಹಾಡುವೆನಯ್ಯಾ ಶಿವಶರಣರ, ನೋಡಿದರೆ ನೋಡುವೆನಯ್ಯಾ ಸದ್ಭಕ್ತರ ಸ್ತ್ರೀಯರು ಎನ್ನ ಹೆತ್ತ ತಾಯ್ಗಳೆಂದು. ಎಂಬ ಛಲ ಭಕ್ತಿಗೆ ಬರುತ್ತದೆ. ಪರಸ್ತ್ರೀಯನ್ನು ಮುಟ್ಟೆನು, ಪರಧನವನಪಹರಿಸೆನು, ಪರದೈವವ ಪೂಜಿಸೆನು ಪರಹಿಂಸೆಯ ಮಾಡೆನು, ಪರಲೋಕಪದವ ಬೇಡೆನು ಎಂಬ ನಿಷ್ಠೆ ಬಲಿಯುತ್ತದೆ. ಹೀಗೆ ಶಿವಯೋಗಿಗಳ ಮನ ನೈಷ್ಠಿಕಭಕ್ತಿಗೆ ಎಡೆಗೊಡುತ್ತದೆ. ಗುರುಭಕ್ತಿಯ ಮಾಡುವಲ್ಲಿ ಲಿಂಗಪೂಜೆಯ ನೆರವೇರಿಸುವಲ್ಲಿ ಜಂಗಮವ ನರ್ಚಿಸುವಲ್ಲಿ ನಿಷ್ಠೆ ನೆಲೆಗೊಳ್ಳುತ್ತದೆ. ಗುರುಭಕ್ತಿಯ ಮಾಡಿದುದರಿಂದ ಸರ್ವ ಅವಗುಣಗಳು ಹಿಂಗಿದುವು. ಲಿಂಗಪೂಜೆಯ ಮಾಡಿದುದರಿಂದ ಅಂಗದ ಪ್ರಕೃತಿ ಹಿಂಗಿತು. ಜಂಗಮಾರ್ಚನೆ ಮಾಡಿದುದರಿಂದ ಸಂಸಾರ ವ್ಯಾಮೋಹ ನಿರಸನವಾಯಿತು. ಮನದ ಸಂದೆಯವಳಿದು ಘನಲಿಂಗದ ನೆನಹು ಬಲವಾಯಿತು. ಆಗ ಶಿವಯೋಗಿಗಳ ಅನುಭಾವವೇ ಬೇರೆಯಾಗುತ್ತದೆ.

ಎನ್ನ ಜನನ ಮರಣಂಗಳು ಜಾರಿಹೋದುವಯ್ಯಾ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಪುಣ್ಯ ಪಾಪಂಗಳು ಪಲ್ಲಟವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ.

ಎನ್ನ ಕಾಲಕಲ್ಪಿತಂಗಳೆಲ್ಲ ಕರಗಿಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಪಂಚೇಂದ್ರಿಯ ಸಪ್ತವ್ಯಸನಂಗಳೆಲ್ಲ ಸಣ್ಣಿಸಿ ಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಅಷ್ಟಮದ ಅರಿಷಡ್ವರ್ಗಂಗಳೆಲ್ಲ ನಷ್ಟವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ತನುಕರಣೇಂದ್ರಿಯಂಗಳೆಲ್ಲ ತರಹರವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಮನ ಪ್ರಾಣ ಭಾವಂಗಳೆಲ್ಲ ಬರಿದಾಗಿಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಅಖಂಡೇಶ್ವರಾ

ಹೀಗೆ ಮನ ಪ್ರಾಣ ಭಾವಗಳೆಲ್ಲ ಬತ್ತಲೆಯಾಗಿರಲು ಶಿವಯೋಗಿಗಳಿಗೆ ಅವರ ಪ್ರಾಣವು ಲಿಂಗವನ್ನು ನುಂಗಿತೋ, ಇಲ್ಲವೆ ಲಿಂಗವೇ ಪ್ರಾಣವನ್ನು ನುಂಗಿತೋ. ಭಾವ ಲಿಂಗದಲ್ಲಿ ತುಂಬಿತೋ ಇಲ್ಲವೆ ಲಿಂಗವೇ ಭಾವದಲ್ಲಿ ತುಂಬಿತೋ. ಮನ ಲಿಂಗದಲ್ಲಿ ಮುಳುಗಿತೋ ಇಲ್ಲವೆ ಲಿಂಗವೇ ಮನದಲ್ಲಿ ಮುಳುಗಿತೋ ಎಂಬುದಾವುದೂ ತಿಳಿಯದಾಗುತ್ತದೆ. ಲಿಂಗವನ್ನು ಕೂಡುವ ಅವಿರಳಾವಸ್ಥೆಯಲ್ಲಿ ಏನನ್ನೂ ಅರಿಯದಾಗುತ್ತಾರೆ. ಲಿಂಗವನ್ನು ನೋಡಲಿಚ್ಛಿಸುವ ಕಂಗಳು ನೋಡಿ ನೋಡಿ ದಣಿಯದಾಗುತ್ತವೆ. ಹಾಡಲಿಚ್ಛಿಸುವ ಜಿಹ್ವೆ ಹಾಡಿ ಹಾಡಿ ದಣಿಯದಾಗುತ್ತದೆ. ನೆನೆಯಲಿಚ್ಛಿಸುವ ಮನ ಲಿಂಗವನ್ನು ನೆನೆನೆನೆದು ದಣಿಯದಾಗುತ್ತದೆ. ಮಾಡಿದ ಮಾಟವನ್ನು ನೋಡಿದ ನೋಟವನ್ನು ಕೂಡಿದ ಕೂಟವನ್ನು ಲಿಂಗದಲ್ಲಿ ಮರೆತು ಬಿಡುತ್ತಾರೆ; ಕರ್ಪುರದ ಗಿರಿಯ ಉರಿಉಂಡಂತಾಗುತ್ತಾರೆ. ಶಿವಯೋಗಿಗಳ ನಿಷ್ಠೆ ಸಾವಧಾನಭಕ್ತಿಯಾಗಿ ನೆಲೆಗೊಳ್ಳುತ್ತದೆ. ಲಿಂಗಭೋಗೋಪಭೋಗಿಯಾಗಿಯೇ ಸಕಲ ಪದಾರ್ಥಗಳನ್ನು ಸ್ವೀಕರಿಸುವರು. ಸಕಲ ಪದಾರ್ಥದ ಪೂರ್ವಾಶ್ರಯವನ್ನು ಶಿವಮಂತ್ರ ಶ್ರೀವಿಭೂತಿಯಿಂದ ಕಳೆದು ಶುದ್ಧಸಂಸ್ಕಾರವೆನಿಸಿ ಶಿವನೇತ್ರದಿಂದ ನೋಡಿ ಶಿವಹಸ್ತದಿಂದ ಮುಟ್ಟಿ ಶಿವ

ಲಿಂಗಕ್ಕೆ ಅರ್ಪಿಸಿ ಶಿವಪ್ರಸಾದವೆನಿಸಿ ಆ ಶಿವಪ್ರಸಾದವನು ಶಿವನಿಂದ ಸನ್ನಿಹಿತರಾಗಿ ಶಿವಜಿಹ್ವೆಯಲ್ಲಿ ಭೋಗಿಸಿ ಶಿವಪ್ರಸಾದಿಗಳಾಗುತ್ತಾರೆ. ಆಗ ಎಲ್ಲವೂ ಪ್ರಸಾದಮಯ, ಆಧಿ-ವ್ಯಾಧಿ, ಆಗು-ಹೋಗು, ಅರುಹು-ಮರಹು, ಸುಖ-ದುಃಖ, ಮಾನ-ಅಪಮಾನ, ಹಾನಿ-ವೃದ್ಧಿ, ಭಯ-ಭೀತಿ, ಲಜ್ಜೆ-ಮೋಹಗಳೆಲ್ಲ ಪ್ರಸಾದವಾಗುತ್ತವೆ. ಪೃಥ್ವಿ ಆಕಾಶದೊಳಗೆಲ್ಲ ಲಿಂಗದ ಮಹಾಪ್ರಸಾದದ ಬೆಳಗು ತುಂಬುತ್ತದೆ. ಚರಾಚರದೊಳಗೆಲ್ಲ ಲಿಂಗಪ್ರಸಾದದ ಬೆಳಗೇ ಬೆಳಗು!! ಎಲ್ಲಿಡೆಯಲ್ಲಿ ಪ್ರಸಾದದ ಬೆಳಗು ತುಂಬಿರುವದರಿಂದ ಉಂಟು-ಇಲ್ಲ ಎಂಬುದಕ್ಕೆ ತೆರಹಿಲ್ಲದಾಗುತ್ತದೆ. ಪ್ರಾಣ ಲಿಂಗದಲ್ಲಿ ಕೂಡಿ ಲಿಂಗ ಪ್ರಾಣದಲ್ಲಿ ಬೆರೆದಿರಲು ಪಂಚಪ್ರಾಣ ವಾಯುಗಳ ಸಂಚಲಗುಣವಳಿಯುತ್ತದೆ. ಚಿತ್ತ ಲಿಂಗದಲ್ಲಿ ಅಚ್ಚೊತ್ತಿ ದಂತಾಗುತ್ತದೆ. ಭಿನ್ನವಳಿದು ಏಕಸಮರಸವಾಗುತ್ತದೆ. ಸುಖ-ದುಃಖ ನಾಸ್ತಿಯಾಗುತ್ತದೆ. ಶಿವಜ್ಞಾನ ಮೊಳೆದೋರುತ್ತದೆ. ಸ್ವಾನುಭಾವ ಜ್ಞಾನಾಮೃತವನುಂಡು ಏನೇನೂ ಅರಿಯದಂತಾಗುತ್ತಾರೆ. ಕಡೆಮೊದ ಲಿಲ್ಲದ ಬೆಳಗಿನೊಳಡಗಿ ಪರಮ ಶಿವಯೋಗಿಗಳಾಗುತ್ತಾರೆ. ಇಂತಪ್ಪ ಶರಣರು ಐಕ್ಯಸ್ಥಲದಲ್ಲಿ ನೆಲೆನಿಂದು ಲಿಂಗಾಂಗಸಾಮರಸ್ಯವನ್ನು ಅನುಭವಿ ಸುತ್ತಿರುವದು ಉಪಮಾತೀತವಾಗಿದೆ. ಷಣ್ಮುಖಶಿವಯೋಗಿಗಳ ವ್ಯಕ್ತಿತ್ವ ಅರಳುತ್ತ ಅರಳುತ್ತ ಹೋಗಿ ಜ್ಞಾನದ ತಿಳಿವೆಳಗಾಗಿದೆ. ಅವರ ಜೀವನ ವನ್ನು ನಿರೀಕ್ಷಿಸಿದರೆ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವ, ಮಹಾದೇವಿ ಯಕ್ಕನವರೇ ಮೊದಲಾದ ಶಿವಶರಣರ ನೆನಪಾಗದಿರದು. ಅವರ ನಡೆನುಡಿ ಗಳೇ ಷಣ್ಮುಖಸ್ವಾಮಿಗಳಲ್ಲಿ ಸಾಕಾರವಾದಂತಿವೆ.

ಷಣ್ಮುಖಶಿವಯೋಗಿಗಳು ಬಸವಣ್ಣನವರಂತೆ ಕೈಂಕರ್ಯ ಸ್ವಭಾವ ವುಳ್ಳವರು. ಎನಗೆ ದಾಸೋಹಂಭಾವನೆಯ ಕರುಣಿಸಿ ಬದುಕಿಸಯ್ಯಾ ಎಂದು ಅಂಗಲಾಚಿ ಬೇಡಿಕೊಳ್ಳುತ್ತಾರೆ. ಅವರ ಮನದ ಆಳಾಪವನ್ನು ಕೇಳಿರಿ :

ಶಿವ ಶಿವಾ ಎನ್ನ ಮನದಾಳಾಪವ ಅವಧರಿಸಯ್ಯಾ
ಎನಗೆ ಭಕ್ತಿ ಬೇಡ ಎನಗೆ ಜ್ಞಾನ ಬೇಡ

ಎನಗೆ ವೈರಾಗ್ಯ ಬೇಡ ಎನಗೆ ವಿರತಿಯು ಬೇಡ
ನಿಮ್ಮ ಶರಣರು ಉಟ್ಟ ಮೈಲಿಗೆಯ ಬಟ್ಟೆ, ಉಗುಳಿದ ತಾಂಬೂಲ
ಒಕ್ಕು ಮಿಕ್ಕ ಪ್ರಸಾದವನೆ ಕರುಣಿಸಿ, ಅವರ ಪಡುಗ ಕಾಯ್ವಂತೆ
ಪಾದರಕ್ಷೆಯನೆ ಹಿಡಿಯುವದಕೆ ಯೋಗ್ಯನ ಮಾಡಿ, ಅವರ
ಕಡೆಯ ಬಾಗಿಲನೆ ಕಾಯುವಂತೆ ಮಾಡಯ್ಯಾ
ಅಖಂಡೇಶ್ವರಾ

ಇಷ್ಟು ಕಿಂಕರಭಾವನೆ ಅಡಗಿದೆ ಶಿವಯೋಗಿಗಳಲ್ಲಿ. ಅವರ ವೈರಾಗ್ಯವೂ ಅಷ್ಟೇ ಘನತರವಾಗಿದೆ.

ಮಡುವಿನಗ್ಗಣಿ ಗಿಡದ ಹೂ ಒಡಲಿಗೆ ಅನ್ನ
ನುಡಿ ನುಡಿಗೆ ಮೃಡನ ಸ್ಮರಣೆ ಇರಲು ಜಡರ ಹಂಗೇಕೆ ?

ಎಂದು ಹೇಳಿ ತಮ್ಮ ವೈರಾಗ್ಯದ ಮನೋಭಾವನೆಯನ್ನು ಹೀಗೆ ಸ್ಪಷ್ಟ ಪಡಿಸಿರುವರು.

ನಿತ್ಯಲಿಂಗಾರ್ಚನೆಯ ಮಾಡುತ್ತ ಸದ್ಭಕ್ತರನರಸುತ್ತ
ಭಕ್ತಿ ಭಿಕ್ಷವ ಬೇಡುವೆನೆಂದು ಬರುವಾಗ
ಗ್ರಾಮದ ಬಾಗಿಲಲ್ಲಿ ತಡೆವಂತೆ ಮಾಡಯ್ಯ ಎನ್ನ !
ಆರಾರು ತಡೆಯದಿರ್ದಡೆ ಆ ಗ್ರಾಮವ ಹೊಕ್ಕು
ಮನೆ ಮನೆ ತಿರಿವಂತೆ ಮಾಡಯ್ಯ ಎನ್ನ !
ಮನೆ ಮನೆ ತಿರಿದಡೆ ಎನ್ನ ಕಂಡು
ಸರ್ವರು ಅಡ್ಡಮೋರೆಯನ್ನಿಕ್ಕುವಂತೆ ಮಾಡಯ್ಯ ಎನ್ನ !
ಆ ಗ್ರಾಮವನುಳಿದು ಮತ್ತೊಂದು ಗ್ರಾಮವನರಸಿಕೊಂಡು
ಬರುವ ಬಟ್ಟೆಯಲ್ಲಿ
ಜಳ ತಗುಲಿ ಕಳೆ ಕುಂದಿ ಮುಖಬಾಡಿ
ಒಡಲೊಳಗಣ ಕ್ಷುಧಾಗ್ನಿ ಘಾಳಿಸಿ ತನು ಸುಟ್ಟು ನಡೆವ ಗತಿಗೆಟ್ಟು
ದ್ರವಗುಂದಿ ಧರೆಗೆ ಬೀಳುವಂತೆ ಮಾಡಯ್ಯ ಎನ್ನ !

ಆ ಸಮಯದಲ್ಲಿ ನಿಮ್ಮ ನೆನಹು ಮರೆದು
ಜಗದ ಭೋಗವ ಆಸೆ ಮಾಡಿದೆನಾದಡೆ
ಅಖಂಡೇಶ್ವರಾ, ನಿಮ್ಮ ಶ್ರೀಪಾದಕ್ಕೆ
ದೂರಸ್ಥನ ಮಾಡಯ್ಯ ಎನ್ನ ದೇವರದೇವ !!

(ಪು. ೧೪೩ - ವ. ೧೩೦)

ಮಹಾಶಿವಶರಣರ ನುಡಿಯಂತೆ ನಡೆದು ಷಣ್ಮುಖಶಿವಯೋಗಿಗಳು ಅವರ ವ್ಯಕ್ತಿತ್ವದ ಮಟ್ಟವನ್ನು ಮುಟ್ಟುತ್ತಾರೆ. ಇಷ್ಟೇ ಏಕೆ ? ಆ ಶಿವಶರಣರೇ ಇವರ ತನು ಮನ ಭಾವಗಳನ್ನು ಆವರಿಸುತ್ತಾರೆ. ಶಿವಯೋಗಿಗಳೇ ತಮ್ಮದೊಂದು ವಚನದಲ್ಲಿ ಹೀಗೆ ಹೇಳುತ್ತಾರೆ.

ಇಷ್ಟಲಿಂಗವಾಗಿ ಎನ್ನ ಸ್ಥೂಲತನುವಿಗೆ ಅರಸನಾಗಿರ್ಪನಯ್ಯಾ
ಬಸವಣ್ಣನು.
ಪ್ರಾಣಲಿಂಗವಾಗಿ ಎನ್ನ ಸೂಕ್ಷ್ಮತನುವಿಗೆ ಅರಸನಾಗಿರ್ಪನಯ್ಯಾ
ಚೆನ್ನಬಸವಣ್ಣನು.
ಭಾವಲಿಂಗವಾಗಿ ಎನ್ನ ಕಾರಣತನುವಿಗೆ ಅರಸನಾಗಿರ್ಪನಯ್ಯಾ
ಪ್ರಭುದೇವರು.

ಈ ಅರಸರಿಗೆ ಶಿವಯೋಗಿಗಳು ನಮೋ ನಮೋ ಎಂದು ಆತ್ಮಾರ್ಪಣೆ ಮಾಡುತ್ತಾರೆ. ಸಂಗನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನ್ನುತ್ತಾರೆ. ಆತ್ಮಾರ್ಪಣೆಯ ನನೆಕೊನೆವೋಗಿ ಕ್ರಿಯಾಜ್ಞಾನ ಸಾಮರಸ್ಯವಾಗಿ ಶಿವಯೋಗಿಗಳು ಲಿಂಗಲೀಲಾವಿಲಾಸದಲ್ಲಿ ತೊಳಗಿ ಬೆಳಗುವರು; ಮಹಾಬಯಲೊಳಗೆ ನಿರವಯಲಾಗುವರು.

## ತತ್ತ್ವದರ್ಶನ

ಷಣ್ಮುಖಶಿವಯೋಗಿಗಳು ಅನುಭಾವದ ಆಳವನ್ನು ಮುಟ್ಟಿದವರೆಂದು ಇದುವರೆಗಿನ ವಿವೇಚನೆಯಿಂದ ಸ್ಪಷ್ಟವಾಗುತ್ತದೆ. ಈ ಶಿವಾನುಭಾವ

ಆವರಿಗೆ ಷಟ್‌ಸ್ಥಲಾಚರಣೆಯಿಂದ ಪ್ರಾಪ್ತವಾಗಿದೆಯೆಂಬುದು ಸುಸ್ಪಷ್ಟ. ಷಟ್‌ಸ್ಥಲವು ಅಖಂಡೇಶ್ವರ ವಚನಗಳಲ್ಲಿ ಸುಮಧುರ ಕಾವ್ಯವಾಗಿ ಅರಳಿರುವುದಲ್ಲದೆ ಗಂಭೀರವಾದ ತಾತ್ವಿಕವಿವೇಚನೆಯ ಸ್ವರೂಪವನ್ನು ಪಡೆದಿದೆ. ಈ ವಚನಗಳನ್ನೋದುವದರಿಂದ ಷಟ್‌ಸ್ಥಲವು ಕೇವಲ ಸಾಧನೆಯ ಮಾರ್ಗವೇ ಆಗಿರದೆ ಒಂದು ಸಿದ್ಧಾಂತವೂ ಆಗಿದೆಯೆಂಬುದು ಗೋಚರವಾಗುತ್ತದೆ. ನಮ್ಮ ಹಿಂದೂ ದರ್ಶನದಲ್ಲಿ ಮೂರು ವಿಭಾಗ ಗಳನ್ನು ಮಾಡಬಹುದು.

(೧) ಮುಕ್ತಿ.
(೨) ಭುಕ್ತಿ.
(೩) ಸಿದ್ಧಿ.

ಅದ್ವೈತವನ್ನು ಪ್ರತಿಷ್ಠಾಪಿಸುವ ವೇದಾಂತವಿಭಾಗವು 'ವಿದ್' ಅಂದರೆ To Know ಅರಿ, ತಿಳಿ ಎಂಬ ಮೂಲಧಾತುವು ಸ್ಪಷ್ಟಪಡಿಸು ವಂತೆ ಜ್ಞಾನವನ್ನು ಹಿಡಿದು ಮುಕ್ತಿ ( ಮುಚ್ ಅಂದರೆ To Liberate ಬಿಡುಗಡೆ ) ಯನ್ನು ಸಾಧಿಸಿತು. ಮುಕ್ತಿಪದದ ಮೂಲಧಾತುವು ಸೂಚಿಸುವಂತೆ ಆತ್ಮ ತನ್ನನ್ನು ಆವರಿಸಿದ ಘಟಕಗಳಿಂದ ಬಿಡುಗಡೆ ಹೊಂದುತ್ತಾನೆ. ಭುಕ್ತಿಮಾರ್ಗದಲ್ಲಿ ಜೀವಾತ್ಮನು ಪರಮಾತ್ಮನಲ್ಲಿ ಬೆರಿಸಿ ಬೇರಿಲ್ಲದಂತಾಗದೆ ಅವನ ಸನ್ನಿಧಿಯಲ್ಲಿ ಉಳಿದು ಶಾಶ್ವತ ಸುಖವನ್ನು ಅನುಭವಿಸುವನು. ಭುಕ್ತಿ ಎಂಬ ಪದವು ಭುಜ್ To Enjoy ಅನು ಭವಿಸು ಎಂಬ ಅರ್ಥವನ್ನು ಕೊಡುತ್ತದೆ. ಮೊದಲನೆಯದರಲ್ಲಿ ಆತ್ಮನು ಸಕ್ಕರೆಯೇ ತಾನಾದರೆ ಎರಡನೆಯದರಲ್ಲಿ ಆತನು ಸಕ್ಕರೆಯ ಸವಿಯನ್ನು ಸವಿಯುತ್ತ ಪರಮಾತ್ಮನಿಂದ ಬೇರೆಯಾಗಿರುತ್ತಾನೆ. ಮೂರನೆಯದು ಸಿದ್ಧಿಮಾರ್ಗ. ಇದರಲ್ಲಿ ಆತ್ಮನನ್ನು ಆವರಿಸಿದ ಸಕಲ ತತ್ತ್ವಗಳು ಸಿದ್ಧಿವಡೆದು ಶಿವಸ್ವರೂಪವಾಗಿ ಪೂರ್ಣ ವ್ಯಕ್ತಿತ್ವವೇ ವಿಕಸನವಾಗಿ ಸಮರಸಾನಂದವನ್ನು ಪಡೆಯುತ್ತ ಶಿವನಲ್ಲಿ ಬೇರಿಲ್ಲದಂತೆ ಬೆರೆಯುವವು. ಇಲ್ಲಿ ಬಿಡುಗಡೆಗಿಂತಲೂ ಪೂರ್ಣ ಸಿದ್ಧಿ ( Intrgration of the whole personality ) ಮಹತ್ವವಾದುದು. ಲಿಂಗದಿಂದ ಬೇರ್ಪಟ್ಟ ಅಂಗ

ಲಿಂಗವೇ ಆಗಿ ಪರಿಣಮಿಸುವದು. ಬಿಡುಗಡೆ (ಮುಕ್ತಿ) ಎಂಬ ಪದ ಇಲ್ಲಿ ಇಲ್ಲವೇ ಇಲ್ಲವೆಂಬ ಅರ್ಥವಲ್ಲ. ಅದು ಸಂಸಾರವ್ಯಾಮೋಹದಿಂದ ಬಿಡುಗಡೆ ಹೊಂದುವದು ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಮೋಕ್ಷ ವೆಂಬ ಪದವನ್ನು ಹಲವು ಸಲ ಪೂರ್ಣಸಿದ್ಧಿ ಎಂಬ ಅರ್ಥದಲ್ಲಿಯೂ ಬಳಸುವುದುಂಟು. ಆದರೆ ಮೂಲ ಕಲ್ಪನೆಯಲ್ಲಿ ಮೇಗಣ ಮೂರೂ ವಿಭಾಗಗಳಲ್ಲಿ ಅಂತರವಿದೆಯೆಂಬುದನ್ನು ಅರಿತರೆ ಸಾಕು. ಈ ಮೂರಕ್ಕೂ ಆಧಾರವಾಗಿರುವ ಗ್ರಂಥಗಳಲ್ಲಿಯೂ ಅಂತರವುಂಟು. ಮೊದಲಿನವೆರಡಕ್ಕೆ ವೇದ ( ಉಪನಿಷತ್ತು, ಬ್ರಹ್ಮಸೂತ್ರ, ಭಗವದ್ಗೀತೆ ಈ ಪ್ರಸ್ಥಾನತ್ರಯಿ ) ಆಧಾರವಾದರೆ ಮೂರನೆಯದಕ್ಕೆ ಶಿವಾಗಮಗಳೇ ಆಧಾರ. ಮೊದಲಿನ ವೆರಡನ್ನು ವೇದಾಂತವೆಂದು ಕರೆದರೆ ಮೂರನೆಯದನ್ನು ಸಿದ್ಧಾಂತವೆಂದು ಕರೆಯಲಾಗಿದೆ. ಈ ಮಾರ್ಗದಲ್ಲಿ ಬರುತ್ತಿದೆ ಷಟ್‌ಸ್ಥಲ. ಅದು ಸಿದ್ಧಾಂತ; ವೇದಾಂತವಲ್ಲ. ಅದಕ್ಕೆ ದ್ವೈತಾದ್ವೈತದ ಹಂಗು ಇದ್ದಂತೆ ಕಂಡುಬರುವದಿಲ್ಲ. ಅಂತೆಯೇ ಬಸವಣ್ಣನವರು "ದ್ವೈತಾದ್ವೈತವ ನಾನರಿಯೆನಯ್ಯಾ.........." ಎಂದು ಹೇಳಿರುವರು. ವಸ್ತುಸ್ಥಿತಿ ಹೀಗಿದ್ದರೂ ಷಟ್‌ಸ್ಥಲವನ್ನು ದ್ವೈತಾದ್ವೈತವೆಂದೂ ಶಿವಾದ್ವೈತವೆಂದೂ ಶಕ್ತಿವಿಶಿಷ್ಟಾದ್ವೈತವೆಂದೂ ಕರೆದವರೂ ಉಂಟು. ಅವರ ಪ್ರಯತ್ನಗಳನ್ನು ನೋಡಿದರೆ ದ್ವೈತ ಅದ್ವೈತಗಳೆರಡೇ ಮೋಕ್ಷದ ಕಲ್ಪನೆಗಳೆಂದೂ ಆಸ್ತಿಕ ವಾದ ಎಲ್ಲ ದರ್ಶನಗಳನ್ನೂ ಇವೆರಡರ್ಥದಲ್ಲಿಯೇ ವಿವರಿಸಬೇಕೆಂದೂ ಅರ್ಥವಾಗುತ್ತದೆ. ಆದರೆ, ಸಿದ್ಧಿಯೂ ಮೋಕ್ಷದ ಒಂದು ಸ್ವತಂತ್ರವಾದ ಕಲ್ಪನೆಯೆಂಬುದನ್ನು ಗಮನಿಸಿದರೆ ಮೇಲಿನಂತೆ ಅರ್ಥೈಸುವ ಕಾರಣವಿಲ್ಲ ವೆಂದು ವಿದಿತವಾಗುತ್ತದೆ. ಆಗಮಗಳ ವಿಚಾರಕ್ಕೂ ವೇದ ಉಪನಿಷತ್ತು-ಗಳ ವಿಚಾರಕ್ಕೂ ಹಲವೆಡೆ ಸಾಮ್ಯಗಳಿದ್ದರೂ ಆಗಮಗಳ ದಾರಿಯೇ ಬೇರೆ ಎಂಬುದನ್ನು ನಾವು ಗಮನಿಸಬೇಕು. ಷಟ್‌ಸ್ಥಲಕ್ಕೆ ಶಿವಾಗಮ ಗಳೇ ಮೂಲ. ಶಿವಾನುಭಾವವೇ ಅದರ ಧ್ಯೇಯ. ಆದುದರಿಂದಲೇ ಷಟ್‌ಸ್ಥಲವು ಒಂದು ಸ್ವತಂತ್ರಸಿದ್ಧಾಂತವೆಂದು ನಾವು ಪ್ರತಿಪಾದಿಸಿದೆವು.

ಷಟ್‌ಸ್ಥಲಸಿದ್ಧಾಂತದಲ್ಲಿ ಜೀವ ಜಗತ್ತು ಈಶ್ವರ ಈ ತತ್ವಗಳ

ಸಂಬಂಧ ಹೀಗೆ ನಿರೂಪಿತವಾಗಿದೆ.

## ೧. ಅಖಂಡೇಶ್ವರ ವಚನಗಳನ್ವಯದ ವಿವರಣೆ :

ಪರಬ್ರಹ್ಮ ಶೂನ್ಯವಾಗಿ, ನಿರವಯವಾಗಿ, ಸಚ್ಚಿದಾನಂದ ನಿತ್ಯಪರಿಪೂರ್ಣವಾಗಿ ತನ್ನ ತಾನರಿಯದೆ ಅನಂತಕಾಲವಿರ್ದುದು. ಸ್ವಲೀಲೆಯಿಂದೆ ಜಗದ ಲೀಲಾವೈಭವಂಗಳ ನಟಿಸಬೇಕೆಂದು ಆ ಪರಬ್ರಹ್ಮದಲ್ಲಿ ನೆನಹು ದೋರಿತು. ಆ ನೆನಹೇ ನಿರ್ಧರಿಸಿ ಚಿತ್ ಎನಿಸಿತು. ಆ ಚಿತ್ತಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳೊಗೆದುವು. ಚಿನ್ನಾದ, ಚಿದ್ಬಿಂದು, ಚಿತ್ಕಳೆಗಳು ಮೂಲ ಚಿತ್ತುವಿನೊಡನೆ ಗಟ್ಟಿಗೊಂಡು ಮಹಾಲಿಂಗವಾಯಿತು. ಆ ಮಹಾಲಿಂಗವೇ ಪಂಚಮುಖದ ಸದಾಶಿವನೆನಿಸಿತು. ಆ ಸದಾಶಿವನಿಂದ ಬ್ರಹ್ಮ ವಿಷ್ಣು ರುದ್ರರೆಂಬ ತ್ರಿಮೂರ್ತಿಗಳುದಿಸಿದರು. ಆ ತ್ರಿಮೂರ್ತಿಗಳಿಂದ ಸ್ವರ್ಗ ಮರ್ತ್ಯ ಪಾತಾಳಗಳೆಂಬ ತ್ರಿಲೋಕಗಳು ಜನಿಸಿದವು. ಆ ತ್ರಿಲೋಕಗಳ ಮಧ್ಯದಲ್ಲಿ ನಾಮ, ರೂಪ, ಕ್ರಿಯಾತ್ಮಕವಾದ ಸಕಲ ಪ್ರಪಂಚ ವಿಸ್ತಾರವಾಯಿತು.

ಅಖಂಡೇಶ್ವರ ವಚನಗಳಲ್ಲಿ ಅತಿಸಂಕ್ಷೇಪವಾಗಿ ಬಂದ ಜಗದಾವಿರ್ಭಾವದ ತತ್ವವಿವರಣೆ, ಕರಣಹಸಿಗೆ, ಸೃಷ್ಟಿಯ ವಚನ, ವಿಶೇಷಾರ್ಥ ಪ್ರಕಾಶಿಕೆ ಮೊದಲಾದ ಗ್ರಂಥಗಳಲ್ಲಿ ಬಹು ವಿವರವಾಗಿ ಬಂದಿದೆ. ಆ ವಿವರಣೆಗಾಗಿ ಆ ಆ ಗ್ರಂಥಗಳನ್ನು ನೋಡಬಹುದು.

ಇದು ಲಿಂಗದಿಂದ ಸಕಲ ತತ್ವಗಳು ಆವಿರ್ಭವಿಸಿದ ಬಗೆ. ಇದನ್ನು ಸಾಮಾನ್ಯವಾಗಿ ವೀರಶೈವದಲ್ಲಿ ಪ್ರವೃತ್ತಿಯೆಂದು ಕರೆಯುವದುಂಟು. ಹೀಗೆ ಲಿಂಗದಿಂದ ಬೇರ್ಪಟ್ಟ ಅಂಗ, ಲಿಂಗದಲ್ಲಿ ಸಮರಸೈಕ್ಯನಾಗುವ ವಿಧಾನವನ್ನು ನಿವೃತ್ತಿಯೆಂದು ಕರೆಯುವದುಂಟು. ಈ ನಿವೃತ್ತಿಯ ಸಾಧನೆ ಷಟ್‌ಸ್ಥಲದಲ್ಲಿ ಹೀಗಿದೆ :

ಷಟ್‌ಸ್ಥಲಮಾರ್ಗಸಾಧಕನು ಪ್ರಪಂಚವನ್ನು ತೊರೆಯಬೇಕಿಲ್ಲ. ಲೋಕ ಆತನಿಗೆ ಮಿಥ್ಯವಾದುದಲ್ಲ; ಅದು ದುಃಖಮಯವೆಂಬ ಭಾವನೆಯೂ

ಇಲ್ಲ ಆತನಿಗೆ. ಲೌಕಿಕವೃತ್ತಿಯನ್ನು ತುಚ್ಛವೆಂದು ಆತನು ಕಡೆಗಣಿಸುವದಿಲ್ಲ. ತನು ಇಂದ್ರಿಯ ಕರಣಗಳಲ್ಲಿ ತಲೆದೋರುವ ವಿಕಾರಗಳಿಗೆ ವಶವಾಗದೆ ಗುರುದೀಕ್ಷೆಯಿಂದ ಅವಕ್ಕೆ ಶುದ್ಧಿಸಂಸ್ಕಾರವನ್ನು ಕೊಟ್ಟು ತಾನು ಕಾಯಕದಲ್ಲಿ ನಿರತನಾಗುವನು. ಕಾಯಕವೆಂದರೆ ಲೋಕಸಂಗ್ರಹದ ಯಾವದಾದರೂ ಒಂದು ಲೌಕಿಕವೃತ್ತಿ. ಈ ಲೌಕಿಕವೃತ್ತಿಯನ್ನು ಪದಾರ್ಥಸಾಧನೆಗಾಗಿ ಇಲ್ಲವೆ ಮೋಕ್ಷಸಾಧನೆಗಾಗಿ ಮಾಡದೆ ಕೇವಲ ಲಿಂಗಕ್ಕಾಗಿಯೇ ಮಾಡಿ ಅದರ ಫಲವನ್ನು ಲಿಂಗಪ್ರಸಾದವೆಂದೇ ಭೋಗಿಸುವನು, ಈತನೇ ಲಿಂಗಭೋಗೋಪಭೋಗಿ. ಇಂತಹ ಲಿಂಗಭೋಗೋಪಭೋಗ ದುಃಖಪ್ರದವಲ್ಲ; ಶಾಶ್ವತ ಸುಖಪ್ರದವಾದುದು; ಲಿಂಗಾಂಗಸಾಮರಸ್ಯವನ್ನು ನೀಡುವದು. ಅದರ ವಿವರಣೆ ಹೀಗೆ :

ಷಟ್‌ಸ್ಥಲಸಿದ್ಧಾಂತದ ಸಾರವನ್ನು ಒಂದು ಮಾತಿನಲ್ಲಿ ಹೇಳಿಬಿಡಬಹುದು. ಲಿಂಗ, ಅಂಗ, ಶಕ್ತಿ, ಭಕ್ತಿ, ಹಸ್ತ, ಮುಖ, ಪದಾರ್ಥ, ಪ್ರಸಾದ ಈ ಅಷ್ಟವಿಧ ಸಕೀಲದಲ್ಲಿ ಷಟ್‌ಸ್ಥಲವನ್ನೆಲ್ಲ ಅರ್ಥೈಸಬಹುದು. ಅಂಗ ಲಿಂಗದಿಂದ ಆವಿರ್ಭವಿಸಿದೆ. ಲಿಂಗದೊಳಗಣ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು ಸಂಕೋಚಗೊಂಡು ಆಣವಮಲ, ಮಾಯಾಮಲ, ಕಾರ್ಮಿಕಮಲಗಳಾಗಿ ಆತ್ಮನನ್ನು ಆವರಿಸುತ್ತವೆ. ಇದರಿಂದ ಆತ್ಮನಿಗೆ ಘನತ್ವಕ್ಕೆ ಪ್ರತಿಯಾಗಿ ಅಣುತ್ವ, ಸರ್ವಜ್ಞತ್ವಕ್ಕೆ ಪ್ರತಿಯಾಗಿ ಕಿಂಚಿಜ್ಞತ್ವ, ಸರ್ವಕರ್ತೃತ್ವಕ್ಕೆ ಪ್ರತಿಯಾಗಿ ಕಿಂಚಿತ್‌ಕರ್ತೃತ್ವ ಪ್ರಾಪ್ತವಾಗುತ್ತದೆ. ಇದೇ ಬಂಧನ. ಲಿಂಗಗತವಾದ ಶಕ್ತಿ ಅಂಗದಲ್ಲಿ ಇಚ್ಛಾಜ್ಞಾನಕ್ರಿಯಾತ್ಮಕವಾಗಿದ್ದು ಭಕ್ತಿಯೆನಿಸುವದು. ಅದು ಬೀಜರೂಪದಲ್ಲಿರುವದು. ಷಟ್‌ಸ್ಥಲಾಚರಣೆಯಲ್ಲಿ ನಡೆವವನು ಈ ಬೀಜರೂಪದ ಭಕ್ತಿಯನ್ನೇ ಅರಳಿಸಿ ಪುನಃ ಲಿಂಗಗತ ಶಕ್ತಿಯನ್ನಾಗಿ ಮಾರ್ಪಡಿಸುತ್ತಾನೆ. ಈ ವಿಧಾನದಲ್ಲಿ ಅವನಿಗೆ ಮುಖ್ಯವಾದುದು ಸದಾಚಾರ. ಸದಾಚಾರದಿಂದ ಗುರುವಿನ ಕೃಪೆಯಾಗುತ್ತದೆ. ಶ್ರೀಗುರುವು ಆತನ ಕಾರಣ, ಸೂಕ್ಷ್ಮ, ಸ್ಥೂಲ ತನುಗಳಿಗೆ ಕ್ರಮವಾಗಿ ವೇಧಾ, ಮಂತ್ರ, ಕ್ರಿಯಾದೀಕ್ಷೆಗಳನ್ನು ಕೊಟ್ಟು ಅಲ್ಲಿ ಆತನ ಚಿಜ್ಯೋತಿಯನ್ನೇ ಭಾವಲಿಂಗ,

ಪ್ರಾಣಲಿಂಗ, ಇಷ್ಟಲಿಂಗಗಳೆಂಬ ಅಭಿದಾನದಿಂದ ನೆಲೆಗೊಳಿಸುವನು. ಆರಂಭವಾಯಿತು ಭಕ್ತಿಮಾರ್ಗ.

ಭಕ್ತನಿಗೆ ಈಗ ಕ್ರಿಯೆಯೇ ಪ್ರಧಾನವಾಗಿದೆ. ಆದರೆ ಜ್ಞಾನವಿಲ್ಲ ವೆಂದರ್ಥವಲ್ಲ. ಈ ಸ್ಥಲದಲ್ಲಿ ಕ್ರಿಯೆ ಮುಖ್ಯ, ಜ್ಞಾನ ಅದನ್ನು ಅನುಸರಿಸಿ ಹರಿಯುತ್ತದೆ. ಸದಾಚಾರವೇ ಭಕ್ತನ ಮುಖ್ಯ ಲಕ್ಷಣವಾದುದರಿಂದ ಈ ಸ್ಥಲದಲ್ಲಿ ಆಚಾರಲಿಂಗವನ್ನು ನೆಲೆಗೊಳಿಸಿದರು. ಪೃಥಿವ್ಯಂಗದಲ್ಲಿರುವ ಭಕ್ತನು ಆಧಾರಚಕ್ರದಲ್ಲಿ ನೆಲೆಗೊಂಡ ಆಚಾರಲಿಂಗಕ್ಕೆ ಅರ್ಪಣ ಮಾಡ ಬೇಕಾಗುತ್ತದೆ. ಈ ಅರ್ಪಣ ಸ್ಥೂಲತನುವಿಗೆ ಸಂಬಂಧಪಟ್ಟುದು. ಇದನ್ನು ಕಾರ್ಯಾರ್ಪಣವೆಂದೂ ಕರೆಯುವರು. ಆಹಾರಾದಿ ವಸ್ತು ಗಳನ್ನು ಪ್ರಸಾದಭಾವನೆಯಿಂದ ಸ್ವೀಕರಿಸಬೇಕಾಗುತ್ತದೆ. ಷಟ್‌ಸ್ಥಲವು ಒಳ್ಳೇ ವ್ಯಾವಹಾರಿಕವಾದ ತತ್ವಮಾರ್ಗವಾಗಿರುವದರಿಂದ ಅಲ್ಲಿ ಅರ್ಪಣೆಯ ವಿಧಾನ ಸುಲಭವಾಗುವಂತೆ ಶಾಸ್ತ್ರಸಮ್ಮತವಾಗುವಂತೆ ನಡೆಯುತ್ತದೆ. ಪ್ರಪಂಚದಲ್ಲಿ ಮುಳುಗಿದ ಜೀವನಿಗೆ ಒಮ್ಮೆಲೆ ಸರ್ವಸ್ವವನ್ನೂ ಲಿಂಗಕ್ಕೆ ಅರ್ಪಿಸುವದು ಸಾಧ್ಯವಿಲ್ಲ. ಪೃಥಿವ್ಯಂಗದಲ್ಲಿದ್ದ ಭಕ್ತನು ಮೊದಲು ಮೊದಲು ಪೃಥ್ವೀಗುಣವಾದ ಗಂಧವನ್ನು ತನ್ನ ಆಧಾರಚಕ್ರದಲ್ಲಿ ನೆಲೆ ಗೊಂಡ ಆಚಾರಲಿಂಗಕ್ಕೆ ಅರ್ಪಿಸಬೇಕಾಗುತ್ತದೆ. ಅರ್ಪಿಸುವ ಕೆಲಸ ವೇನು ಸಾಮಾನ್ಯವಾದುದಲ್ಲ. ಅರ್ಪಿಸುವ ಹಸ್ತ, ಸ್ವೀಕರಿಸುವ ಮುಖ ಮೊದಲು ಪರಿಶುದ್ಧವಾಗಬೇಕು. ಈ ಸ್ಥಲದಲ್ಲಿ ಗಂಧವನ್ನರ್ಪಿಸುವ ಹಸ್ತವೆಂದರೆ ಚಿತ್ತ. ಮೊದಲು ಚಿತ್ತ ಸದಾಚಾರದಿಂದ ಸುಚಿತ್ತವಾಗ ಬೇಕು. ಕ್ರಿಯಾಶಕ್ತಿಯುತವಾದ ಭಕ್ತಿ ಸದಾಚಾರದಲ್ಲಿ ಶ್ರದ್ಧೆಯನ್ನು ತಳೆದು ಅಲ್ಲಿ ಸ್ಥಿರತೆಯನ್ನು ಪಡೆಯುತ್ತದೆ. ಈ ವಿಧಾನದಿಂದ ಚಿತ್ತ ಸುಚಿತ್ತವಾಗುತ್ತದೆ. ಈಗ ಇಷ್ಟಲಿಂಗಾರಾಧನೆ ನಟ್ಟ ದೃಷ್ಟಿಯಿಂದ ನಡೆ ಯುತ್ತಿರುವುದನ್ನು ನಾವು ಮರೆಯಲಾಗದು. ಆದರೆ, ಪ್ರಾಣಲಿಂಗ, ಭಾವಲಿಂಗಗಳ ಅರ್ಚನೆ ನಡೆದಿರುವದಿಲ್ಲವೆಂದರ್ಥವಲ್ಲ. ಜಾಗ್ರತಾವಸ್ಥೆ ಯಲ್ಲಿ ಇಷ್ಟಲಿಂಗ ಪೂಜೆ ಸ್ವಪ್ನಾವಸ್ಥೆಯಲ್ಲಿ ಪ್ರಾಣಲಿಂಗದ ಪೂಜೆ ಸುಷುಪ್ತಿಯಲ್ಲಿ ಭಾವಲಿಂಗದ ಪೂಜೆ ನಿರಂತರ ನಡೆದಿರುತ್ತದೆಯೆಂದು

ಅನುಭಾವಿಗಳ ಹೇಳಿಕೆಯಿದೆ. ಭಕ್ತನು ಸುಚಿತ್ತವೆಂಬ ಹಸ್ತದಿಂದ ಆಚಾರಲಿಂಗದ ಮುಖವಾದ ಘ್ರಾಣದಲ್ಲಿ ಗಂಧವನ್ನು ಅರ್ಪಿಸುತ್ತಾನೆ. ಬೀಜರೂಪದ ಭಕ್ತಿ ಶ್ರದ್ಧೆಯಾಗಿ ಸದಾಚಾರದಲ್ಲಿ ಪರಿವರ್ತನ ಹೊಂದಿ ಆ ಸದಾಚಾರವೇ ಲಿಂಗವಾಗಿ ಘ್ರಾಣವನ್ನು ಮುಖವನ್ನಾಗಿ ಮಾಡಿ ಕೊಂಡಿರುತ್ತದೆಯೆಂಬುದರ ಅರ್ಥ ಘ್ರಾಣೇಂದ್ರಿಯ ಪರಿಶುದ್ಧವಾಗಿದೆ ಯೆಂಬುದು. ಆತ್ಮನು ತನುಕರಣಾದಿಗಳ ಅಭಿಮಾನವನ್ನು ತೊರೆದು ತನುಶುದ್ಧಿ ಇಂದ್ರಿಯ ಶುದ್ಧಿಯನ್ನು ಪಡೆದು ಪ್ರಗತಿಪಥದಲ್ಲಿ ನಡೆಯುತ್ತಾನೆ.

ಶ್ರದ್ಧೆ ಲಿಂಗೈಕನಿಷ್ಠೆಯಾಗುತ್ತದೆ. ಗುರು, ಶಾಸ್ತ್ರಾದಿಗಳಲ್ಲಿ ನಿಜ ನಿಷ್ಠೆ ಬಲಿದು ಅದು ನೈಷ್ಠಿಕಭಕ್ತಿಯೆನಿಸುತ್ತದೆ. ಭಕ್ತನು ಈಗ ಮಹೇಶ್ವರನಾಗುತ್ತಾನೆ. ತನ್ನೊಳಗಣ ನೈಷ್ಠಿಕ ಭಕ್ತಿಯಿಂದ ಜ್ಞಾನಶಕ್ತಿ ರೂಪವಾದ, ಸ್ವಾಧಿಷ್ಠಾನಚಕ್ರದಲ್ಲಿ ನೆಲೆಗೊಂಡ ಗುರುಲಿಂಗವನ್ನು ಪೂಜಿ ಸುತ್ತಾನೆ. ಸದಾಚಾರ, ನಿಷ್ಠೆ ಇವುಗಳ ಬಲದಿಂದ ಆತನ ಬುದ್ಧಿ ಸುಬುದ್ಧಿಯಾಗುತ್ತದೆ; ಗುರುಲಿಂಗಕ್ಕೆ ರಸರೂಪ ಪದಾರ್ಥವನ್ನರ್ಪಿಸುವ ಹಸ್ತವಾಗುತ್ತದೆ. ಈ ಹಸ್ತದಿಂದಲೇ ಮಹೇಶ್ವರನು ಗುರುಲಿಂಗದ ಮುಖವಾದ ಜಿಹ್ವೆಯಲ್ಲಿ ರಸಪದಾರ್ಥವನ್ನು ಗುರುಲಿಂಗಕ್ಕೆ ಅರ್ಪಿಸುವನು. ಮಹೇಶ್ವರನ ಜಲರೂಪದ ತನು ಪರಿಶುದ್ಧವಾಗಿ ಪ್ರಸಾದವಾಗುತ್ತದೆ. ಜಿಹ್ವೆ, ಬುದ್ಧಿಗಳೂ ಶುದ್ಧಿಯಾಗಿ ಸಿದ್ಧಿವಡೆದ ವಿಷಯವನ್ನು ಉಲ್ಲೇಖಿಸ ಲಾಗಿದೆ. ಆತ್ಮನ ಗತಿ ಮುಂದೆ ಮುಂದೆ ಸಾಗುತ್ತದೆ. ಈ ಅವಧಿಯಲ್ಲಿ ಸದಾಚಾರದಿಂದ ಭಕ್ತನಕಾಯ ಲಿಂಗಕಾಯವಾಗಿದೆ. ಈ ಕಾಯವೇ ಆಚಾರಲಿಂಗಸ್ವರೂಪವಾಗಿದೆ. ಗುರುಬೋಧೆಯಿಂದ ಅಹಂಕಾರ ಮಮ ಕಾರರೂಪದ ಭ್ರಾಂತಿಯಳಿದು ಭಕ್ತನು ಲಿಂಗಜ್ಞಾನಮಯನಾಗುವನು. ಇದೇ ಗುರುಲಿಂಗಸ್ವರೂಪ. ಮುಂದೆ ಬರುವದು ಪ್ರಸಾದಿಸ್ಥಲ. ಈ ಸ್ಥಲದಲ್ಲಿ ಆತ್ಮನಿಗೆ ಪ್ರಾಣ, ವಾಯುರೂಪಾಗಿರದೆ ಲಿಂಗರೂಪವಾಗಿರುವ ದೆಂಬ ಅರಿವು ಉಂಟಾಗುತ್ತದೆ. ಆ ಅರಿವೇ ಶಿವಲಿಂಗಾಭಿಧಾನದಿಂದ ಮಣಿಪೂರಕಚಕ್ರದಲ್ಲಿ ನೆಲಸಿರುತ್ತದೆ. ಮಹೇಶ್ವರನಲ್ಲಿ ತೋರುತ್ತಿದ್ದ ನೈಷ್ಠಿಕಭಕ್ತಿ ಈಗ ಲಿಂಗದಲ್ಲಿ ಎಚ್ಚರಗೊಂಡು ಅವಧಾನಭಕ್ತಿಯಾಗು

ತ್ತದೆ. ಈ ಎಚ್ಚರಿಕೆಯಿಂದ ಅಹಂಕಾರತತ್ವ ನಿರಹಂಕಾರವಾಗಿ ಇಚ್ಛಾಶಕ್ತಿರೂಪದಲ್ಲಿರುವ ಶಿವಲಿಂಗಕ್ಕೆ ಅದರ ಮುಖವಾದ ನೇತ್ರದಲ್ಲಿ ರೂಪವನ್ನು ಅರ್ಪಿಸುವ ಹಸ್ತವಾಗುತ್ತದೆ. ಪ್ರಸಾದಿಯ ತೇಜತತ್ವಕಾಯ ತನ್ನ ವಿಷಯವಾದ ರೂಪವನ್ನು ಶಿವಲಿಂಗಕ್ಕೆ ಅರ್ಪಿಸಿ ಪ್ರಸಾದವಾಗುತ್ತದೆ. ಆತ್ಮನ ನಿಶ್ಚಲತೆಯಿಂದ ಉಂಟಾದ ಚಿತ್ತಶುದ್ಧಿಯೇ ಪ್ರಸಾದಿಸ್ಥಲದ ಪ್ರಗತಿಯು. ಅವಧಾನಭಕ್ತಿ ಮುಂದೆ ಅನುಭವವಾಗುತ್ತದೆ. ಲಿಂಗಾವಧಾನದಿಂದ ಅನನ್ಯವಾದ ಶಿವಾನುಭಾವ ಪ್ರಾಪ್ತವಾಗುತ್ತದೆ. ಚಿತ್ತಶುದ್ಧಿಯಿಂದ ಪ್ರಾಣಲಿಂಗದ ಭಾವ ನೆಲೆಗೊಳ್ಳುತ್ತದೆ. ಆದಿಶಕ್ತಿಯೇ ರೂಪವಾದ ಈ ಲಿಂಗವನ್ನು ಜಂಗಮಲಿಂಗವೆಂದು ಕರೆಯುವರು. ಅರಿವೇ ಪ್ರಧಾನವಾದ ಈ ಸ್ಥಳದ ಲಿಂಗಕ್ಕೆ ಜಂಗಮಲಿಂಗವೆಂದು ಕರೆದಿರುವದು ಸೂಕ್ತವಾಗಿದೆ. ಜಂಗಮಲಿಂಗದಲ್ಲಿದ್ದ ಅನುಭವಭಕ್ತಿಯಿಂದಲೇ ಭಕ್ತನ ಮನಸ್ಸು ಸುಮನಸ್ಸು ಆಗುತ್ತದೆ. ಈ ಜಂಗಮಲಿಂಗಕ್ಕೆ ಸುಮನಸ್ಸೇ ಹಸ್ತ; ತ್ವಕ್ ಇದು ಮುಖ. ಭಕ್ತಿಯ ವಿಕಾಸಸ್ಥಳದಲ್ಲಿ ತ್ವಕ್ ಮತ್ತು ಮನಸ್ಸು ಎರಡೂ ಪರಿಶುದ್ಧವಾಗಿ ಸ್ಪರ್ಶವನ್ನು ಲಿಂಗಕ್ಕೆ ಅರ್ಪಿಸಲು ಅರ್ಹವಾಗುತ್ತವೆ. ಷಟ್‌ಸ್ಥಲಮಾರ್ಗಿಯ ಕಾಯದ ವಾಯುಗುಣ ಈಗ ಪರಿಶುದ್ಧವಾಗಿ ಪ್ರಸಾದವಾಗುತ್ತದೆ. ಈ ಸ್ಥಲವನ್ನೊಳಗೊಂಡು ಮುಂದೆ ಬರುವ ಮೂರು ಸ್ಥಲಗಳು ಜ್ಞಾನಪ್ರಧಾನವಾದುವು; ಆದರೆ, ಕ್ರಿಯಾವಿರಹಿತವಲ್ಲ ಕ್ರಿಯಾಜ್ಞಾನಗಳು ವೀರಶೈವರಲ್ಲಿ ಕ್ರಮಸಮುಚ್ಚಯವಾಗಿರದೆ ಸಮಸಮುಚ್ಚಯವಾಗಿರುವವೆಂಬುದನ್ನು ನಾವು ಲಕ್ಷ್ಯದಲ್ಲಿಡಬೇಕು. ಸಾಧಕನ ವ್ಯಕ್ತಿತ್ವ ಮೊದಲಿನ ಮೂರು ಸ್ಥಲಗಳಲ್ಲಿ ವಿಕಸನಹೊಂದುತ್ತ ಈಗ ಆತ್ಮನು ಪರಮಾತ್ಮನಿಂದ ಭಿನ್ನವಾಗಿರದೆ ಆತನ ಸ್ವರೂಪವೇ ಆಗಿರುತ್ತಾನೆ. ಇಂತಹ ಅನುಭಾವದ ಪರಿಣಾಮವಾಗಿ ಆನಂದಭಕ್ತಿ ಉದಿಸುತ್ತದೆ. ಆತ್ಮ ತಾನೇ ಲಿಂಗವೆಂಬು ಅರಿದುದರ ಆನಂದವೇ ಈ ಸ್ಥಲದ ಭಕ್ತಿ. ಜೀವಭಾವವಿರಹಿತವಾದ ಬುದ್ಧಿಯಲ್ಲಿ ಸತ್ಯವಾದ ಶಿವತತ್ವ ನೆಲೆಗೊಳ್ಳುತ್ತದೆ. ಇದೇ ಶರಣಸ್ಥಲ. ಈ ಸ್ಥಲದಲ್ಲಿ ಪರಾಶಕ್ತಿಯೇ ಪ್ರಸಾದಲಿಂಗರೂಪದಿಂದ ವಿಶುದ್ಧಿಚಕ್ರದಲ್ಲಿ ನೆಲೆಗೊಳ್ಳುತ್ತದೆ. ಈಗ ಸಾಧಕನಿಗೆ ಸುಜ್ಞಾನ ಉದಯವಾಗುತ್ತದೆ.

ಶ್ರೋತ್ರ ಪವಿತ್ರವಾಗಿ ಪ್ರಸಾದಲಿಂಗಕ್ಕೆ ಮುಖವಾಗುತ್ತದೆ ಸುಜ್ಞಾನವೇ ಹಸ್ತವಾಗುತ್ತದೆ. ಈ ಹಸ್ತದಿಂದ ಶ್ರೋತ್ರಮುಖವಾಗಿ ಶಬ್ದವು ಪ್ರಸಾದ ಲಿಂಗಕ್ಕೆ ಅರ್ಪಿತವಾಗುತ್ತದೆ. ಶರಣನ ವ್ಯೋಮಕಾಯ ಪ್ರಸಾದಕಾಯ ವಾಗುತ್ತದೆ. ಮುಂದೆ ಜೀವಾತ್ಮಕ ಉಭಯಭಾವ ಬಯಲಾಗುತ್ತದೆ. ಇದೇ ಐಕ್ಯಸ್ಥಲ. ಈ ಸ್ಥಲದಲ್ಲಿ ಲಿಂಗಾಂಗಸಾಮರಸ್ಯವೇ ಸಮರಸ ಭಕ್ತಿಯಾಗಿ ನಿಲ್ಲುತ್ತದೆ. ಚಿಚ್ಛಕ್ತಿ ಮಹಾಲಿಂಗವಾಗಿ ಆಜ್ಞೇಯಚಕ್ರದಲ್ಲಿ ನೆಲೆಗೊಳ್ಳುತ್ತದೆ. ಹೃದಯ ಪರಿಶುದ್ಧಿಯಾಗಿ ಭಾವಸದ್ಭಾವವಾಗಿ ಕ್ರಮ ದಿಂದ ಮಹಾಲಿಂಗದ ಹಸ್ತ ಮತ್ತು ಮುಖಗಳಾಗುತ್ತವೆ. ಗಂಧ, ರಸ, ರೂಪ, ಸ್ಪರ್ಶಶಬ್ದಗಳಿಂದುಂಟಾಗುವ ತೃಪ್ತಿ ಮಹಾಲಿಂಗಕ್ಕೆ ಈಗ ಅರ್ಪಿತ ವಾಗುತ್ತದೆ. ಅಂಗಪೂರ್ತಿಯಾಗಿ ಲಿಂಗವೇ ಆಗ ಬೆಳಗುತ್ತದೆ. ಹೀಗೆ ಅರ್ಪಣಕ್ರೀಯಿಂದ ಲಿಂಗಭೋಗೋಪಭೋಗಿ ತಾನೆಂಬುದನ್ನೇ ಲಿಂಗಕ್ಕೆ ಅರ್ಪಿಸಿ ತಾನೇ ಪ್ರಸಾದರೂಪನಾಗಿ ಶಿವನಾಗಿ ಬೆಳಗುತ್ತಾನೆ.

ಷಟ್‌ಸ್ಥಲಸಿದ್ಧಾಂತದ ವೈಶಿಷ್ಟ್ಯವಡಗಿರುವುದು ಸಾಧಕನ ವ್ಯಕ್ತಿತ್ವ ವಿಕಸನ ಕ್ರಿಯೆಯಲ್ಲಿ. ಅದ್ವೈತವು ( Intellectual approach to God, ಪರಮಾತ್ಮನನ್ನು ಬುದ್ಧಿಯಿಂದ ಅರಸುವ ಮಾರ್ಗವೆಂದೂ ದ್ವೈತವು ಆತನನ್ನು ಕೇವಲ ಭಾವನೆಗಳಿಂದಲೇ ಅರಸುವ ಮಾರ್ಗವೆಂದೂ ( Emotional approach to God ) ಹೇಳಬೇಕಾಗುತ್ತದೆ. ಷಟ್‌ಸ್ಥಲ ಮಾರ್ಗದಲ್ಲಿ ( Psychological approach ) ಪ್ರಧಾನವಾದರೂ ಅಲ್ಲಿ ಬುದ್ಧಿ ಭಾವನೆ ಮುಂತಾದ ತತ್ತ್ವಗಳಲ್ಲಿ ಲಿಂಗಸ್ವರೂಪವೇ ಆಗಿ ಪರ್ಯ್ಯವಸಾನಹೊಂದುತ್ತವೆ. ಇಲ್ಲಿ ಮುಖ್ಯವಾಗಿರುವುದು ಭಕ್ತಿ; ಅರ್ಪಣೆ. ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣಗಳಲ್ಲಿ ಭಕ್ತಿ ತಾನೇ ಅರ್ಪಿತವಾಗಿ ಶಕ್ತಿಯಾಗುತ್ತದೆ. ವಸ್ತುಗ್ರಹಣವಿಧಾನವನ್ನೇ ಲಿಂಗ ಗ್ರಹಣವಿಧಾನವನ್ನಾಗಿ ಮಾರ್ಪಡಿಸುತ್ತದೆ ಷಟ್‌ಸ್ಥಲಮಾರ್ಗ ಯಾವ ದೊಂದು ವಸ್ತುವಿನ ಕಲ್ಪನೆ ನಮಗಾಗುವ ವಿಧಾನ ಇಂತಿದೆ: ಮೊದಲು ವಸ್ತುಸತ್ತೆಯ ( Exitence ) ಸ್ವಭಾವದ ಅರಿವು ಉಂಟಾ ಗುತ್ತದೆ. ಇದೇ ಭಾವ. ಹೀಗೆ ಭಾವದಲ್ಲಿ ನೆಲೆಗೊಂಡ ವಸ್ತುವಿನ

ಬಗೆಗೆ ತಿಳಿವಳಿಕೆ ಉಂಟಾಗುತ್ತದೆ. ಇದೇ ಜ್ಞಾನ. ಜ್ಞಾನದಲ್ಲಿ ಹೊಳೆದ ವಸ್ತುವಿನ ಬಗೆಗೆ ಮನನಕ್ರಿಯೆ ನಡೆಯುತ್ತದೆ. ಇದು ಮನಸ್ಸು. ಹೀಗೆ ಮನಸ್ಸಿನಲ್ಲಿ ಮೂಡಿದ ವಸ್ತುವಿನ ಬಗೆಗೆ ತಾನು ತನ್ನದು ಎಂಬ ಮಮಕಾರ ಭಾವನೆಯುಂಟಾಗುತ್ತದೆ. ಇದೇ ಅಹಂಕಾರ. ಹೀಗೆ ಅಹಂಕಾರಗೊಂಡ ವಸ್ತುವಿನ ಬಗೆಗೆ ಸಾರಾಸಾರ ವಿಚಾರಕ್ರಿಯೆಯೂ ನಡೆಯುತ್ತದೆ. ಇದು ಬುದ್ಧಿ. ಇಷ್ಟಾದ ಮೇಲೆ ಚಿತ್ ಬೆಳಗಿ ವಸ್ತು ಗಟ್ಟಿಯಾಗುತ್ತದೆ. ಇದು ಮಾನಸಿಕ ದೃಷ್ಟಿಯಿಂದ ವಸ್ತುಗ್ರಹಣವಿಧಾನ. ಷಟ್‌ಸ್ಥಲಮಾರ್ಗದಲ್ಲಿ ಇವೆಲ್ಲ ಪರಿಶುದ್ಧವಾಗುವುದನ್ನು ನಾವು ಈಗಾಗಲೇ ನೋಡಿದ್ದೇವೆ. ಚಿತ್ತ, ಬುದ್ಧಿ, ಅಹಂಕಾರ, ಮನಸ್ಸು, ಜ್ಞಾನ, ಭಾವ ಇವು ಕ್ರಮವಾಗಿ ಸುಚಿತ್ತ, ಸುಬುದ್ಧಿ, ನಿರಹಂಕಾರ, ಸುಮನಸ್ಸು, ಸುಜ್ಞಾನ, ಸದ್ಭಾವಗಳಾಗುವದರಿಂದ ಅಲ್ಲಿ ಮೂರ್ತಿಗೊಳ್ಳುವ ವಸ್ತುಗಳೆಲ್ಲ ವಿಷಯರೂಪವಾಗಿರದೆ ಲಿಂಗರೂಪವಾಗುತ್ತವೆ. ಷಟ್‌ಸ್ಥಲದ ಮಾರ್ಗದಲ್ಲಿ ಅಷ್ಟ ಆವರಣಗಳೂ ಪಂಚ ಆಚಾರಗಳೂ ಅತಿ ಮಹತ್ವವಾದುವು. ನ್ಯಾಯವಾಗಿ ನೋಡಿದರೆ ಹಿಂದಣ ವಿವರಣೆಯಲ್ಲಿಯೇ ಅವುಗಳ ಅಪರೋಕ್ಷವಾದ ವಿವರಣೆ ಬಂದಂತಾಗಿದೆ. ತತ್ವದರ್ಶನವಷ್ಟೇ ಈ ವಿಭಾಗದ ಉದ್ದೇಶವಾಗಿರುವದರಿಂದ ಅವನ್ನಿಲ್ಲಿ ಮತ್ತೆ ವಿವರಿಸಲಾಗಿಲ್ಲ.

## ಸಾಹಿತ್ಯದರ್ಶನ

ಅನುಭಾವವೆಂದರೆ ಆತ್ಮನ ಅನುಭವ. ಲೌಕಿಕವಾದ ಅನುಭವವು, ಆನಂದಾನುಭೂತಿಯು ಸಾಹಿತ್ಯೋದಯಕ್ಕೆ ಕಾರಣವಾಗುವಂತೆ, ಶಿವಾನುಭಾವವೂ, ಆತ್ಮಾನಂದವೂ ಉಚ್ಚತಮವಾದ ಸಾಹಿತ್ಯದ ನಿರ್ಮಿತಿಗೆ ಕಾರಣವಾಗುತ್ತವೆ. ಅನುಭಾವಿಗಳು ತಮ್ಮ ಅನಂತ ಅವಸ್ಥೆಗಳನ್ನೂ ಆನಂದಾನುಭೂತಿಯನ್ನೂ ಶಕ್ತಿಗಳಲ್ಲಿ ವಿವರಿಸುವುದುಂಟು. ಇದು ಅನುಭಾವಸಾಹಿತ್ಯವೆಂದು ಜಗತ್ತಿನ ಅನೇಕ ಸಾಹಿತ್ಯಗಳಲ್ಲಿ ಹೆಸರಾಗಿದೆ. ಒಂದೊಂದು ನಾಡಿನ ಅನುಭಾವಿಗಳಿಗೂ ಒಂದೊಂದು ವೈಶಿಷ್ಟ್ಯವಿರುವುದುಂಟು. "ಸೋಫಿ" ಅನುಭಾವಿಗಳು ದೇವನನ್ನು ಸತಿಯೆಂದೂ ತಾವೇ ಪತಿಯೆಂದೂ ಕರೆದುಕೊಂಡರೆ ಕನ್ನಡನಾಡಿನಲ್ಲಿ ಶರಣಸತಿಯಾಗಿ

ಲಿಂಗಪತಿಯಾದನು. ಇಷ್ಟೇ ಅಲ್ಲ; ಅನುಭಾವಿಗಳು ಅನೇಕ ಕಡೆಗೆ ಲೌಕಿಕ ವ್ಯವಹಾರವನ್ನೇ ಮರೆಯುವುದುಂಟು. ಪರಮಾತ್ಮನ ಧ್ಯಾನದಲ್ಲಿ ಮಂತ್ರಮುಗ್ಧರಾಗಿ ತಮಗೆ ಲೋಕಮರುಳು, ಲೋಕಕ್ಕೆ ತಾವು ಮರುಳರಾಗಿ ಇರುವರು. ಶಿವಶರಣರ ಅನುಭಾವದ ರೀತಿಯೇ ಬೇರೆ. ಆನಂದಾನುಭೂತಿಯಲ್ಲಿ ಪರವಶರಾಗಿ ಬಿಡುವುದೇ ಶಿವಾನುಭಾವಿಗಳ ಧ್ಯೇಯವಲ್ಲ. ಆನಂದಾನುಭೂತಿಯಿಂದ ಲೋಕಕ್ಕೆ ಮರಳಿ, ಇಲ್ಲಿಯ ಕಾರ್ಯಕಲಾಪಗಳಲ್ಲಿ ಭಾಗವಹಿಸಿ ಲೋಕಸಂಗ್ರಹವನ್ನೆಸಗಿ ಲೋಕಾನಂದವನ್ನುಂಟುಮಾಡುವುದೇ ಅವರ ಗುರಿ. ಅಂತೆಯೇ ಶಿವಶರಣರು ತಮ್ಮ ಸುತ್ತುಮುತ್ತಲಿನ ಸಮಾಜದೊಡನೆ ನಿಕಟ ಸಂಬಂಧವನ್ನಿಟ್ಟು ಕೊಂಡಿರುವರು. ಅವರ ಶಿವಾನುಭಾವದ ಸಾಹಿತ್ಯ ಈ ಸಮಾಜದಿಂದ ಪೋಷಣೆಗೊಂಡು ಅದಕ್ಕೆ ಪೋಷಕವಾಗುತ್ತದೆ.

ಷಣ್ಮುಖಶಿವಯೋಗಿಗಳು ಶಿವಶರಣರ ಈ ಘನವಾದ ಪರಂಪರೆಯಲ್ಲಿ ಬಂದ ಮಹಾನುಭಾವಿಗಳು. ಪರಮ ಶಿವಯೋಗಿಗಳು. ಯೋಗದಲ್ಲಿಯೂ ಶಿವಯೋಗದಲ್ಲಿಯೂ ವಿಶುದ್ಧಿಚಕ್ರಕ್ಕೆ ಕುಂಡಲಿನಿ (ಲಿಂಗಶಕ್ತಿ) ಜಾಗ್ರತೆಗೊಂಡಾಗ ವಾಕ್‌ಸಿದ್ಧಿಯಾಗುವದೆಂದು ಹೇಳುವುದುಂಟು. ಆಗ ನುಡಿಗೆ ಅಪಾರಪಾದ ಶಕ್ತಿ ಬಂದು ಉಸಿರಾಡಿಸಿದುದು ಕಾವ್ಯವಾದುದುಂಟು. ಅನೇಕ ಶಿವಶರಣರ ಶಿವಯೋಗಿಗಳ, ಹಾಗು ಅನುಭಾವಿಗಳ ವಚನಗಳೇ ಈ ಮಾತಿಗೆ ನಿದರ್ಶನವೆನ್ನಬಹುದು. ಷಣ್ಮುಖಶಿವಯೋಗಿ ಶಿವಯೋಗದ ತುಟ್ಟತುದಿಯನ್ನು ಮುಟ್ಟಿದವರೆಂಬುದರಲ್ಲಿ ಸಂದೇಹವೇ ಇಲ್ಲ. ಇಂತಹ ಶಿವಯೋಗಿಗಳು ಅಮರವಾಗಿ ಸತ್ಯಶುದ್ಧ ಸಾಹಿತ್ಯವಾಗಿರುವುದರಲ್ಲಿ ಸಂದೇಹವಿಲ್ಲ.

ಅಖಂಡೇಶ್ವರ ವಚನಗಳನ್ನು ತೆರೆಯುತ್ತಲೇ ಕಾವ್ಯದ ಮೆರಗು ಗೋಚರವಾಗುತ್ತದೆ. ಬೀಜದ ಮರೆಯಲ್ಲಿ ಅಡಗಿರ್ದ ಅಂಕುರವು ಬಹಿರ್ಗತವಾದಂತೆ. ಮುಗಿಲ ಮರೆಯಲ್ಲಿ ಅಡಗಿರ್ದ ಕ್ಷಣಿಕ ಸ್ಫುರಿಸಿದಂತೆ. ಮನದ ಮರೆಯಲ್ಲಿ ಅಡಗಿರ್ದ ಘನಲಿಂಗವು ಉದಯ

ವಾಯಿತೆ " ಎಂದು ಹೇಳುವುದರಲ್ಲಿ ಸುಂದರವಾದ ಕಾವ್ಯವಡಗಿಲ್ಲವೇ ? ಪಿಂಡಜ್ಞಾನಸ್ಥಲದ ಸಹಜ ಚಿತ್ರವನ್ನು ಈ ಉಪಮೆಗಳು ಸ್ಫುಟಗೊಳಿಸುತ್ತವೆ. ಸಂಸಾರ ಹೇಯಸ್ಥಳಗಳಲ್ಲಿ ಬರುವ ವಚನಗಳೆಲ್ಲ ಕಾವ್ಯದ ಆಗರವಾಗಿವೆ. ಅಲ್ಲಿ ಸಂಸಾರದ ಬಗ್ಗೆ ಉಂಟಾಗಿರುವ ಹೇಯಭಾವನೆ ನಾನಾ ಮುಖವಾಗಿ ಚಿತ್ರಿತವಾಗಿವೆ. ಕುಶಲ ಚಿತ್ರಗಾರರಾಗಿ ಷಣ್ಮುಖಶಿವಯೋಗಿಗಳು ಜೀವನದ ವಿವಿಧ ಅವಸ್ಥೆಗಳನ್ನು ಮನಂಬುಗುವಂತೆ ಬಣ್ಣಿಸುವರು. ಒಂದೊಂದು ಚಿತ್ರವನ್ನು ನೆನೆದರೆ ಸಾಕು, ಸಂಸಾರಹೇಯದ ಪೂರ್ಣಕಲ್ಪನೆ ಬಂದುಹೋಗುತ್ತದೆ.

ಶುನಿ ಎಲುವ ಕಡಿವಲ್ಲಿ ತನ್ನ ಬಾಯ ಲೋಳೆ ತನಗೆ ಸವಿದಟ್ಟುತಿಪ್ಪುದಲ್ಲದೆ ಅವುಗಳೊಳಗೇನು ಸಾರಸವಿಯುಂಟೇ ಎಂದು ಕೇಳುವ ಮಾತು ಎಷ್ಟು ತೀಕ್ಷ್ಣವಾಗಿದೆ. ನೋಡಿರಿ. ತನು ಮನಗಳ ವಿಕಾರಕ್ಕೆ ಒಳಗಾದ ಆತ್ಮ ಆ ಕೋಟಲೆಯಿಂದ ಬಿಡುಗಡೆ ಹೊಂದುವುದಕ್ಕೆ ಹಂಬಲಿಸುತ್ತಾನೆ. ಆ ಹಂಬಲವೇ ಕಾವ್ಯವಾಗಿ ಹರಿದಿದೆ.

" ಮತಿಗೆಟ್ಟೆನಯ್ಯಾ ಮನದಾಸೆಯ ಕಚ್ಚಿ
ಧೃತಿಗೆಟ್ಟೆನಯ್ಯಾ ತನುವಿನಾಸೆಯ ಕಚ್ಚಿ "

ಎಂದು ಹೇಳುತ್ತಾರೆ ಶಿವಯೋಗಿಗಳು. ಮನದಾಸೆಯ ಕಚ್ಚಿ, ತನುವಿನಾಸೆಯ ಕಚ್ಚಿ ಎಂಬಲ್ಲಿ ತನುಮನಗಳ ವಿಕಾರಕ್ಕೆ ಒಳಗಾದ ಜೀವನ ಸಹಜ ಸ್ಥಿತಿ ಸುಂದರವಾಗಿ ನಿರೂಪಿತವಾಗಿದೆ. ಒಳಗಿನ ಭಾವನೆಗಳನ್ನು ಸುಂದರವಾದ ಚಿತ್ರಗಳಿಂದ ಅಭಿವ್ಯಕ್ತಮಾಡುವ ಕಲೆ ಷಣ್ಮುಖಶಿವಯೋಗಿಗಳಿಗೆ ಚೆನ್ನಾಗಿ ಗೊತ್ತಿದೆ.

" ಓಂಕಾರವೆಂಬ ಮರಕ್ಕೆ ಷಟ್‌ಕೃತಿಯೆಂಬ ಶಾಖೆ ಪಸರಿಸಿ
ಷಡಕ್ಷರಗಳೆಂಬ ತಳಿರು ಕೊನರಿ
ಷಟ್‌ಸ್ಥಲಗಳೆಂಬ ಕುಸುಮಗಳಾಗಿ

ಷಡುಲಿಂಗಾಂಗಗಳೆಂಬ ಮೋಕ್ಷದ ಮಧುರ ಫಲಂಗಳ
ತಳೆದಿಪ್ಪುದು ನೋಡಾ. "

ಎಂದು ಓಂಕಾರವೃಕ್ಷದ ಚಿತ್ರವನ್ನು ಎಷ್ಟು ಪೂರ್ತಿಯಾಗಿ ಎಳೆದಿದ್ದಾರೆ.

ಕೋಳಿ ಕೂಗುವುದು ತನ್ನ ಬೆಳಗಿನ ವೇಳೆಯನರಿದು
ಕತ್ತೆ ಕೂಗುವುದು ತನ್ನ ಹೊತ್ತಿನ ಗೊತ್ತನರಿದು
ಶಿವಭಕ್ತನಾದ ಬಳಿಕ, ತನ್ನ ಅರುಹು ಕುರುಹಿನ,
ಭಕ್ತಿಮುಕ್ತಿಯ ಗೊತ್ತನರಿಯದ ಬಳಿಕ
ಆ ಕೋಳಿ ಕತ್ತೆಗಳಿಗಿಂತ ಕರಕಷ್ಟ ನೋಡಾ

ಅಖಂಡೇಶ್ವರಾ.

—( ಪು. ೬೭ ವ. ೩೨ )

ಎಂದು ಹೇಳುವಲ್ಲಿ ಮಾತು ಎಷ್ಟು ಸ್ಫುಟವಾಗಿ ಬರುತ್ತದೆ ಎಂಬುದನ್ನು ನೋಡಬೇಕು. ಲೋಕಾನುಭವ ಶಿವಾನುಭಾವದ ಅಭಿವ್ಯಕ್ತಿಗೆ ಅನುವಾಗ ಬಲ್ಲದೆಂಬುದಕ್ಕೆ ಉತ್ತಮ ನಿದರ್ಶನವಿದು. ಷಣ್ಮುಖಸ್ವಾಮಿಗಳ ವಚನ ಗಳಲ್ಲಿ ಹಲವೆಡೆ ಬಸವಾದಿಪ್ರಮುಥರ ವಚನಗಳ ಛಾಯೆ ಕಂಡು ಬರುವು ದಾದರೂ ಅವು ಕೇವಲ ಅನುಕರಣವಾಗಿರದೆ ಆ ವಿಚಾರಧಾರೆಯನ್ನು ಈ ಮಹಾಬೆಳಗು ಮುಂದುವರಿಸಿಕೊಂಡು ಹೋಗಿರುತ್ತದೆಯೆಂಬುದಕ್ಕೆ ಇಂತಹ ವಚನಗಳೇ ಸಾಕ್ಷಿ. "ಖ್ಯಾತಿಭಕ್ತನ ಡಂಭಕದ ಭಕ್ತಿಯನ್ನು ಖ್ಯಾತಿಭಕ್ತನ ಡಂಭಕದ ಭಕ್ತಿ ಹಾವಸೆಗಲ್ಲ ಮೆಟ್ಟಿ ಜಾರಿಬಿದ್ದು ಕೊಡನೊಡೆ ದಂತಾಯಿತ್ತು" ಎಂದು ಮನಮುಟ್ಟುವಂತೆ ಎದೆ ತಟ್ಟುವಂತೆ ವರ್ಣಿಸಿದ್ದಾರೆ.

" ತನ್ನೆಡೆಯಲ್ಲಿ ಕತ್ತೆ ಸತ್ತು ಬಿದ್ದುದನರಿಯದೆ
ಪರರೆಡೆಯಲ್ಲಿಯ ನೊಣವನಾರಿಸುವ ಮರುಳಮಾನವನಂತೆ "

ಎಂದು ಅನ್ಯರಲ್ಲಿ ಅವಗುಣವನರಸುವ ಕುನ್ನಿಮಾನವರನ್ನು ಶಿವಯೋಗಿ ಗಳು ಕಟುವಾಗಿ ಟೀಕಿಸಿದ್ದಾರೆ. ಕಟುವಾದ ಟೀಕೆಗೆ ಶೈಲಿಯೂ ಒಳ್ಳೆಯ

ಹರಿತಾಗಿದೆ. ವಜ್ರದಂತೆ ಕಠಿಣವಾದ ಈ ಶೈಲಿ ಒಮ್ಮೊಮ್ಮೆ ಕುಸುಮಕ್ಕಿಂತಲೂ ಕೋಮಲವಾಗಿದೆ.

" ಗಾಳಿ ಗಂಧವನಪ್ಪಿದಂತೆ ನಿಮ್ಮ ಮುಟ್ಟಿದ ಚಿತ್ತ
ಎತ್ತೆತ್ತ ಹರಿದಾಡಿದಡೇನು ಅತ್ತತ್ತ ನೀವೇ ಅಲ್ಲದೆ
ಅನ್ಯವಿಲ್ಲವಯ್ಯಾ "

ಎಂದು ಬಣ್ಣಿಸುವಲ್ಲಿ ಶೈಲಿಯ ಮಾರ್ದವತೆಯನ್ನೂ ವೈಶಾಲ್ಯವನ್ನೂ ಕಾಣಬಹುದು.

" ಅನುಭಾವಿಯಾದರೆ ತಿರುಳು ಕರಗಿದ ಹುರಿದ ಬೀಜದಂತಿರಬೇಕು "

ಎಂದು ಅನಿರ್ವಚನೀಯವಾದ ಸ್ಥಿತಿಯನ್ನು ಮನದಲ್ಲಿ ಗಟ್ಟಿಯಾಗಿ ಮೂಡುವಂತೆ ಚಿತ್ರಿಸಿದ್ದಾರೆ. ಹೀಗೆ ಶಿವಯೋಗಿಗಳ ವಚನಗಳು ನಿತ್ಯ ನೂತನವಾದ ಉಪಮೆಗಳಿಂದ ತುಂಬಿ ತುಳುಕುತ್ತವೆ.

" ಕಪಿಯ ಕೈಯಲ್ಲಿ ರತ್ನವ ಕೊಟ್ಟಡೆ
ಅದು ಹಣ್ಣೆಂದು ಕಡಿದು ನೋಡಿ
ಕಲ್ಲೆಂದು ಬಿಸುಟುವುದಲ್ಲದೆ
ಆ ರತ್ನದ ದಿವ್ಯ ಬೆಳಗನರಿವುದೇ ಅಯ್ಯಾ ? "

ಎಂದು ಕೊಡುವ ದೃಷ್ಟಾಂತಗಳು ಬಹು ಮಾರ್ಮಿಕವಾಗಿವೆ.

ಕಾವ್ಯಸ್ಥಳವನ್ನು ವಿವರಿಸುವ ಈ ವಿಭಾಗದಲ್ಲಿ ಶಿವಯೋಗಿಗಳ ಶರಣಸತಿ ಲಿಂಗಪತಿ ಈ ಭಾವನೆಯಿಂದ ಸ್ಫುರಣಗೊಂಡ ವಚನಗಳನ್ನೂ ಮರೆಯುವಂತಿಲ್ಲ. ಪತಿಯ ಆಗಮನದ ಚಿಂತೆ ನಿರೀಕ್ಷಣೆ, ಕುತೂಹಲ, ಆನಂದ, ವಿರಹಾವಸ್ಥೆ, ಒಡನಾಟ ಮುಂತಾದ ಅತ್ಯಂತ ಸೂಕ್ಷ್ಮವಾದ ಭಾವನೆಗಳು ಒಳ್ಳೇ ಕಾವ್ಯಮಯವಾಗಿ ಚಿತ್ರಿತವಾಗಿವೆ.

" ನಲ್ಲನ ಕಾಣದೆ ತಲ್ಲಣಗೊಳುತಿರ್ಪುದು ನೋಡಾ ಎನ್ನ ಮನವು "

" ಹೊತ್ತಿನ ಗೊತ್ತಿಗೆ ಬಾರದಿರ್ದಡೆ ಹೊತ್ತು ಹೋಗದು ಕೇಳಿರೇ "
ಬುದ್ಧಿಗೂಡದು ನಿದ್ರೆಬಾರದುಯೆನಗೆ ಸುದ್ದಿ ಹೇಳಿರೆ ಆತಗೆ
ಸದ್ದಿಲ್ಲದೆ ಎದ್ದು ಹೋದನು ನೋಡಿರೇ
ಮುನಿಸು ತಿಳುಪಿ ಇದ್ದಲ್ಲಿಗೆ ಕರೆದು ತನ್ನಿರೇ "

ಈ ವಚನದಲ್ಲಿ ತಮ್ಮ ವಿರಹಾವಸ್ಥೆಯನ್ನು ಬಹು ಮಾರ್ಮಿಕವಾಗಿ ವಿವರಿಸಿದ್ದಾರೆ ಶಿವಯೋಗಿಗಳು. ಶರಣಸ್ಥಲದ ಅನೇಕ ವಚನಗಳಲ್ಲಿ ಇಂತಹ ಎತ್ತರದ ಉತ್ತಮ ಕಾವ್ಯವನ್ನು ಕಾಣುತ್ತೇವೆ.

ಷಣ್ಮುಖಶಿವಯೋಗಿಗಳು ಪ್ರಸನ್ನ ಕವಿತಾಗುಣವನ್ನು ಪಡೆದ ಮಹಾನುಭಾವಿಗಳು. ಅವರ ಒಂದೊಂದು ಮಾತೂ ಮಿಂಚಿನಂತೆ ಹೊರ ಹೊಮ್ಮುತ್ತವೆ. ಆತ್ಮಾನುಭಾವ ಲೋಕಾನುಭವವಂತೂ ಮಿತಿಯಿಲ್ಲದೆ ನೆಲೆಗೊಂಡಿವೆ ಶಿವಯೋಗಿಗಳಲ್ಲಿ. ಶಾಸ್ತ್ರಪರಿಚಯವೇನು ಕಡಿಮೆಯೇ ವೇದ, ಆಗಮ, ಉಪನಿಷತ್ತು ವಚನಗ್ರಂಥಗಳನ್ನು ಆಳವಾಗಿ ಅಭ್ಯಸಿಸಿ ಶಿವಯೋಗಿಗಳು ಬಹುಶ್ರುತರೂ ಆಗಿದ್ದರು. ಅವರ ವಚನಗಳಲ್ಲಿ ಈ ಮಾತಿಗೆ ನಿದರ್ಶನವೆಂದು ಅನೇಕ ಉದಾಹರಣೆಗಳನ್ನು ಕೊಡಬಹುದು. ಸ್ಕಂದಪುರಾಣ, ಶಿವಧರ್ಮ, ಲಿಂಗಪುರಾಣ, ಪರಮರಹಸ್ಯ, ವೀರಶೈವ ಸಂಗ್ರಹ, ವೀರಮಾಹೇಶ್ವರರ ಸಂಗ್ರಹಗ್ರಂಥ, ಶಿವರಹಸ್ಯ, ವಾತುಲಾಗಮ, ಭೀಮಾಗಮ, ಸೂಕ್ಷ್ಮಾಗಮ ಮುಂತಾದ ಅನೇಕ ಗ್ರಂಥಗಳಿಂದ ವಿಪುಲ ವಾಗಿ ಆಧಾರಗಳನ್ನು ಕೊಟ್ಟಿದ್ದಾರೆ. ಹಠಯೋಗ, ಲಯಯೋಗ, ರಾಜ ಯೋಗ, ಮಂತ್ರಯೋಗ, ಶಿವಯೋಗ ಮುಂತಾದ ಯೋಗಗಳ ಪ್ರತ್ಯಕ್ಷ ಅನುಭವಗಳನ್ನು ಶಿವಯೋಗಿಗಳು ಸ್ಫುಟವಾಗುವಂತೆ ವಿವರಿಸಿದ್ದಾರೆ. ಇಂತಹ ಅದ್ವಿತೀಯವಾದ ವ್ಯಕ್ತಿತ್ವದಿಂದ ಹೊರಹೊಮ್ಮಿದ ವಚನಗಳು ಸಾಹಿತ್ಯದೃಷ್ಟಿಯಿಂದ ಅದ್ವಿತೀಯವಾಗಿವೆಯೆಂಬುದರಲ್ಲಿ ಸಂದೇಹವೇ ಇಲ್ಲ.

## ಪ್ರಭಾವ ಮುಕ್ತಿ

ಸುಮಾರು ಹನ್ನೊಂದನೆಯ ಶತಮಾನದಿಂದ ಆರಂಭವಾದ ವಚನ ವಾಙ್ಮಯದ ಪ್ರವಾಹಕ್ಕೆ ಹದಿನೇಳನೆಯ ಶತಮಾನದ ಷಣ್ಮುಖಶಿವಯೋಗಿ

ಗಳೇ ಚರಮವಿರಮಸ್ಥಾನದಂತಿದ್ದಾರೆ. ಅವರ ವಚನಗಳು ಬಸವಣ್ಣ, ಪ್ರಭುದೇವ, ಮಹಾದೇವಿಯಕ್ಕನವರೇ ಮೊದಲಾದ ಆದ್ಯರ ವಚನಗಳಿಗೆ ಯಾವ ದೃಷ್ಟಿಯಿಂದಲೂ ಕಡಿಮೆಯಾದುವಲ್ಲ. ವಚನವಾಙ್ಮಯದ ಪರಂಪರೆಯನ್ನು ಮುಂದುವರೆಸಿಕೊಂಡುಬಂದ ಘನವಾದ ಕೀರ್ತಿ ಶಿವಯೋಗಿಗಳಿಗೆ ಸಲ್ಲುತ್ತದೆ. ಆದರೆ, ಅವರಿಂದೀಚೆಗೆ ಮತ್ತೆ ಆ ಪರಂಪರೆ ಮುಂದುವರೆದಂತೆ ಕಂಡುಬರುವದಿಲ್ಲ. ಇಂದಿಗೂ ನಮ್ಮಲ್ಲಿ ಜನಪ್ರಿಯ ರಾದ ಹಲವು ವಚನಕಾರರಲ್ಲಿ ಷಣ್ಮುಖಶಿವಯೋಗಿಗಳೊಬ್ಬರು. ಅವರ ವಚನಗಳೂ ಹಾಡುಗಳೂ ಇಂದಿಗೂ ನಮ್ಮ ಜನತೆಯ ಮನೆಮಾತು ಗಳಾಗಿವೆ. ಶಿವಯೋಗಿಗಳ ಪ್ರಭಾವಮುದ್ರೆ ಇಷ್ಟು ದಿಟವಾಗಿದೆ ನಮ್ಮ ಜನಾಂಗದ ಮೇಲೆ ಇಂತಹ ಮಹಾಶಿವಯೋಗಿಗಳು ರಚಿಸಿದ ಅಖಂಡೇಶ್ವರ ವಚನಗಳನ್ನು ಕನ್ನಡಿಗರು ಆದರದಿಂದ ಸ್ವೀಕರಿಸುವರೆಂದು ಆಶಿಸಲಾಗಿದೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಡಾ. ಆರ್. ಸಿ. ಹಿರೇಮಠ,
ಎಮ್. ಎ., ಪಿಎಚ್. ಡಿ.,
ಕನ್ನಡ ಪ್ರಾಧ್ಯಾಪಕರು

# ಪರಿವಿಡಿ



ಗ್ರಂಥ ಕರ್ತೃಗಳಾದ ಷಣ್ಮುಖ ಸ್ವಾಮಿಗಳವರ ಮಠ, ಜೇವರಗಿ

॥ ಶ್ರೀಗುರು ಬಸವಲಿಂಗಾಯ ನಮಃ ॥

ಷಣ್ಮುಖಸ್ವಾಮಿಗಳು ನಿರೂಪಿಸಿದ

ತೂರ್ಯನಿರಾಲಂಬ ಶರಣನ ಅರುಹಿನ

### ಷಟ್‌ಸ್ಥಲದ ವಚನ

# ಅಖಂಡೇಶ್ವರನ ವಚನಗಳು

## ಪಿಂಡಸ್ಥಲ

[೧]ಆದಿಯಾಧಾರ[೧]ಗಳಿಲ್ಲದಂದು
ನಾದಬಿಂದುಕಳೆಗಳಿಲ್ಲದಂದು
[೨]ವೇದಶಾಸ್ತ್ರಾಗಮ[೨]ತರ್ಕತಂತ್ರಗಳಿಲ್ಲದಂದು
ಚೌಷಷ್ಟಿವಿದ್ಯೆ[೩]ಕಲೆಗಳಿಲ್ಲದಂದು
ಭೇದಾಭೇದಗಳಿಂದೆ ತೋರುವ ತೋರಿಕೆಗಳೇನೂ ಇಲ್ಲದಂದು
ಅಖಂಡೇಶ್ವರಾ, ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು ೧

ಪೃಥ್ವಿ ಆಕಾಶಂಗಳಿಲ್ಲದಂದು
ದಿಕ್ಕುವಿದಿಕ್ಕುಗಳಿಲ್ಲದಂದು
ಸಪ್ತದ್ವೀಪ ಸಪ್ತಸಮುದ್ರಂಗಳಿಲ್ಲದಂದು
ತತ್ತ್ವಮಸ್ಯಾದಿ ವಾಕ್ಯಂಗಳಿಲ್ಲದಂದು
ನಿತ್ಯಾನಿತ್ಯಂಗಳೇನೂ ಇಲ್ಲದಂದು
ಅಖಂಡೇಶ್ವರಾ, ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು ೨

---

೧- ಆದಿಯನಾದಿ (ಕ, ಡ) ೨. ವೇದಾಗಮಶಾಸ್ತ್ರ (ಬ) ೩. ದ್ಯಾ (ಬ)

ಕಾಲಕಲ್ಪಿತಂಗಳಿಲ್ಲದಂದು
ಲೀಲೆ ಇಪ್ಪತ್ತೈದ [1]ನಟಿಸ[1]ದಂದು
ಬಾಲಚಂದ್ರನ ಸೂಡದಂದು
ಸಾಲುಮಸ್ತಕಮಾಲೆಯ ಧರಿಸದಂದು
ಕಾಲ ಕಾಮ ಮಾಯಾ [2]ದಕ್ಷಾದಿ[2]ಗಳಿಲ್ಲದಂದು
ಅಖಂಡೇಶ್ವರಾ, ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು ೩

ಪ್ರಕೃತಿ ವಿಕೃತಿಗಳಿಲ್ಲದಂದು
ಮಹಾಶೇಷ ಕಮಠ ದಿಗ್ಗಜಂಗಳಿಲ್ಲದಂದು
ಅಷ್ಟತನು ಕುಲಗಿರಿಗಳಿಲ್ಲದಂದು
ಷಡಧ್ವ ಷಡುಋತುಗಳಿಲ್ಲದಂದು
ಶಶಿ ರವಿಗಳ ಬೆಳಗು ಪಸರಿಸದಂದು
ಅಖಂಡೇಶ್ವರಾ, ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು ೪

ಹಗಲಿರುಳ್ಗಳಿಲ್ಲದಂದು
ಯುಗಜುಗಂಗಳು ಮರಳಿ ಮರಳಿ ತಿರುಗದಂದು
ಗಗನಮೇರುಕೈಲಾಸಂಗಳಿಲ್ಲದಂದು
ಖಗಮೃಗಶೈಲವೃಕ್ಷಂಗಳಿಲ್ಲದಂದು
ಅಜಹರಿಸುರಾಸುರಮನುಮುನಿಗಳಿಲ್ಲದಂದು
ಜಗದ ಲೀಲಾವೈಭವಂಗಳೇನೂ ಇಲ್ಲದಂದು
ಅಖಂಡೇಶ್ವರಾ, ನಿಮ್ಮ ನೀವರಿಯದೆ ಅನಂತಕಾಲವಿರ್ದಿರಂದು ೫

ಅಂತು ವಚನಗಳು ೫

---

೧. ನಾಡ (ಕ)    ೨. ವಿಧಿ (ಕ)

## ಪಿಂಡಜ್ಞಾನ ಸ್ಥಲ

ನೀವು ನಿಮ್ಮ ಸ್ವಲೀಲೆಯಿಂದೆ
ಜಗದ ಲೀಲಾವೈಭವಂಗಳ ನಟಿಸಬೇಕೆಂದು ನಿಮ್ಮಲ್ಲಿ ನೆನಹುದೋರಲು
ಆ ನೆನಹು ನಿರ್ಧರಿಸಿ ಚಿತ್ತೆನಿಸಿತ್ತು
ಆ ಚಿತ್ತಿನಿಂದೆ ಚಿತ್‌ನಾದ ಚಿತ್‌ಬಿಂದು ಚಿತ್‌ಕಳೆಗಳೊ[1]ಗೆದುವು[1]
ಆ ಚಿತ್‌ನಾದ ಚಿತ್‌ಬಿಂದು ಚಿತ್‌ಕಳೆ
ಆ ಮೂಲಚಿತ್ತು ಸಹವಾಗಿ ಗ[2]ಟ್ಟಿಗೊಂಡು
ಅಖಂಡ ಗೋಳಕಾಕಾರ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು
ಆ ಮಹಾಲಿಂಗವೇ ಪಂಚಮುಖವನ್ನೈದಿಹ ಸದಾಶಿವನೆಂದೆನಿಸಿತ್ತು
ಆ ಸದಾಶಿವನಿಂದೆ ಬ್ರಹ್ಮ-ವಿಷ್ಣು-ರುದ್ರರೆಂಬ ತ್ರೈಮೂರ್ತಿಗಳುದಿಸಿದರು
ಆ ತ್ರೈಮೂರ್ತಿಗಳಿಂದೆ ಸ್ವರ್ಗ-ಮರ್ತ್ಯ-ಪಾತಾಳಂಗಳೆಂಬ
ತ್ರೈಲೋಕಂಗಳು ಜನಿಸಿದುವು
ಆ ತ್ರೈಲೋಕಂಗಳ ಮಧ್ಯದಲ್ಲಿ ಸಚರಾಚರ ಹೆಣ್ಣು ಗಂಡು
ನಾಮ ರೂಪು ಕ್ರಿಯಾದಿ ಸಕಲ ವಿಸ್ತಾರವಾಯಿತ್ತು
ಇಂತಿವೆಲ್ಲವೂ ನಿಮ್ಮ ನೆನಹುಮಾತ್ರದಿಂದಾದವಯ್ಯ ಅಖಂಡೇಶ್ವರಾ ೧

ಎನ್ನ ತನುವಿನ ಮರೆಯಲ್ಲಿರ್ದ ಚಿನುಮಯನ ಅರಸುವ ಬನ್ನಿರೇ
ಎನ್ನ ಮನದ ಮರೆಯಲ್ಲಿರ್ದ ಮಹಾಘನವಸ್ತುವ ಹುಡುಕುವ ಬನ್ನಿರೇ
ಎನ್ನ ಪ್ರಾಣದ[4] ಮರೆಯಲ್ಲಿರ್ದ ಪರಬ್ರಹ್ಮವೆಂಬ ಅಖಂಡೇಶ್ವರನ
ನೋಡುವ ಬನ್ನಿರೇ ೨

---

೧. ದಗಿದವು (ಅ) ೨. ಘು (ಅ, ಬ) ೩. ಧ್ಯೆ (ಅ, ಬ, ಕ, ಡ)
೪. ನ (ಅ)

ಬೀಜದ ಮರೆಯಲ್ಲಿ ಅಡಗಿರ್ದ ಅಂಕುರವು ಬಹಿರ್ಗತವಾದಂತೆ
ಮುಗಿಲ ಮರೆಯಲ್ಲಿ ಅಡಗಿರ್ದ ಕ್ಷಣಿತ[೧]ವು ಸ್ಫುರಿಸಿದಂತೆ
ಎನ್ನ ಮನದ ಮಧ್ಯದಲ್ಲಿ ಅಡಗಿರ್ದ ಮಹಾ[೨]ಘನಲಿಂಗವು[೨]
ತನ್ನ ಲೀಲೆಯಿಂದೆ ತಾನೇ ಉದಯವಾಗಲು
ನಿಮ್ಮ ಆದಿಯನಾದಿಯ ನಿಲ[೩]ವ ಕಂಡೆನಯ್ಯ ಅಖಂಡೇಶ್ವರಾ ೩

ನೆನಹಿಗೆ ಬಾರದ ವಸ್ತುವ ನೆನೆವ ಪರಿ [೪]ಇನ್ನೆಂತೋ![೪]
ಭಾ[೫]ವಕ್ಕೆ ಬಾರದ ವಸ್ತುವ ಭಾವಿಸುವ ಪರಿ [೪]ಇನ್ನೆಂತೋ![೪]
ನೆನೆಯದೆ ಭಾವಿಸದೆ ಎನ್ನೊ[೬]ಳಗೆ[೬] ಬಯಲುರೂಪವಾಗಿ
ತೋರಿದನು ನೋಡಾ ಅಖಂಡೇಶ್ವರಾ ೪

ಅನಂತಕಾಲ ಎನ್ನ ಒಡಲಮರೆಯೊಳಗೆ ಅಡಗಿದ್ದು
ಎನಗೆ ಕಾಣಿಸದೆ ಇದ್ದುದು ಇದೇನು ನಿಮ್ಮ ಗಾರುಡವಯ್ಯ
ನೀವು ನಿಮ್ಮ ಕರುಣದಿಂದೆ ಎನ್ನ ಒಡಲ ಮರವೆಯ ಒಡೆದು
ಎನ್ನ ಕಣ್ಣಮುಂದಣ ಸತ್ತ್ವ-ರಜ-ತಮದ ಪರದೆಯ ಹರಿಯಲೊಡನೆ
ನಿಮ್ಮ ನಿತ್ಯದ ನಿಲವ ಕಂಡೆನಯ್ಯ ಅಖಂಡೇಶ್ವರಾ ೫

ಎನ್ನಂಗದ ಮಧ್ಯದೊಳಗೆ ಮಂಗಳಾಂಗನ ಬೆಳಗು
ಥಳಥಳಿಸಿ ಹೊಳೆಯುತಿರ್ಪುದಾಗಿ
ಎನ್ನ ಕಂಗಳ [೭]ಕಳವಳಿಕೆ[೭] ಕಡೆಗಾಯಿತ್ತು
ಎನ್ನ ಮನದ ಮುಂದಣ ಮರವೆ ಹಾರಿಹೋಯಿತ್ತು
ಅಖಂಡೇಶ್ವರನ ನಿಲವು ನಿಶ್ಚಲವಾಗಿ ಕಾಣಬಂದಿತ್ತು ೬

---

೧. ಕ (ಅ,ಬ,ಕ,ಡ) ೨. ಘನವು (ಅ,ಬ,ಕ,ಡ) ೩. ಲು (ಅ,ಬ)
೪. ಎಂತೋ (ಅ) ೫. ಭ (ಅ, ಕ) ೬. ಳೆ ಬಗೆ (ಅ)
೭. ಕಾಳಿಗೆ (ಅ) ಕಾಳಿಕೆ (ಕ,ಡ)

ಅಂಜನದ ಬಲದಿಂದೆ ನೆಲದ[೧] ಮರೆಯ ದ್ರವ್ಯವ ಕಾಣುವಂತೆ
ಎನ್ನ ಚಿತ್ತಿನ ಮಧ್ಯದಲ್ಲಿ ನಿತ್ಯ ಶಿವಜ್ಞಾನಾಂಜನವು ಪ್ರಜ್ವಲಿಸಲಾಗಿ
ತತ್ವಾತತ್ವಂಗಳು [೨]ವ್ಯಕ್ತವಾದುವು
ಅಖಂಡೇಶ್ವರನೆಂಬ ಪರವಸ್ತುವು ಹೂಳಿರ್ದ ಗೊತ್ತು ಕಾಣಬಂದಿತ್ತು ೭

ಅಂತು ವಚನಗಳು ೧೨

---

೧. ನ (ಅ)  ೨. ವ್ಯಕ್ತಿಕರ (ಅ,ಬ,ಕ)

# ಸಂಸಾರಹೇಯ ಸ್ಥಲ

ಎನ್ನ ಭವಭವದಲ್ಲಿ ತೊಳಲಿಸಿ ಬಳಲಿಸಿದ ಕಾರಣವೇನಯ್ಯ
ಎನ್ನ ಸಂಸಾರಶರಧಿಯಲ್ಲಿ ಮುಳುಗಿಸಿ
ಏಳಗೊಡದೆ ಇರಿಸಿದ ಕಾರಣವೇನಯ್ಯ
ನಾನು ಮಾಡಿದ ಅಪರಾಧವೇನಯ್ಯ
ನೀವು ಮಾಡಲಾನಾದೆನಲ್ಲದೆ ಎನಗೆ ಬೇರೆ ಸ್ವತಂತ್ರವೇ ಹೇಳಾ
ಅಖಂಡೇಶ್ವರಾ ೧

ಅಡವಿಯಲ್ಲಿರ್ದ ಗೋವು ಮನೆಯಲ್ಲಿರ್ದ ಕರುವಿಂಗೆ ಚಿಂತಿಸಿ ಬಂದು
ಹಾಲ[೧]ನೂಡಿ[೧] ಮೋಹ ಮಾಡುವುದಲ್ಲದೆ ಆ ಕರುವೆತ್ತ ಬಲ್ಲುದಯ್ಯ
ನಾನು ಕರ್ಮದೇಹವಿಡಿದು ಪರಿಭವದಲ್ಲಿ ತೊಳಲುತ್ತಿರಲು
ನೀನು ದಯಹುಟ್ಟಿ ಎನ್ನ ಮರವೆಯ ಸಂಸಾರವ ತೊಲಗಿಸಿ
ಕರುಣದಿಂದ ಸಲಹ[೨]ಬೇಕೆಂಬ ಚಿಂತೆ ನಿನಗಲ್ಲದೆ
ನಾನೇನ ಬಲ್ಲೆನಯ್ಯ ಅಖಂಡೇಶ್ವರಾ ೨

ಎಂದು ಅಷ್ಟತನುಗಳು ನಿರ್ಮಿತವಾಗಿ ಪಿಂಡಾಂಡವಾದುವು
ಅಂದು ಇಂದು ಪರಿಯಂತರ ಬಂದೆನಯ್ಯ ಬಹು ಜನ್ಮಂಗಳಲ್ಲಿ
ನೊಂದೆನಯ್ಯ ಸುಖದುಃಖಂಗಳಲ್ಲಿ
ಬೆಂದೆನಯ್ಯ ಸಂಸಾರದಳ್ಳುರಿಯಲ್ಲಿ
ಈ ಸಂಸಾರದಂದುಗವ ತೊಲಗಿಸಿ ನಿಮ್ಮತ್ತ ಎಳೆದುಕೊಳ್ಳಯ್ಯ ಎನ್ನ,
ಅಖಂಡೇಶ್ವರಾ ನಿಮ್ಮ ಧರ್ಮ ನಿಮ್ಮ ಧರ್ಮ ೩

---

೧. ವನೂಡಿ (ಅ) ನುಣಿಸಿ (ಕ)    ೨. ಹು (ಅ, ಬ)

ಘ್ರಾಣೇಂದ್ರಿಯವಿಷಯದಿಂದೆ ಭ್ರಮರ ಕೆಡುವುದು
ಸಂಪಿಗೆಯ ಪುಷ್ಪದಲ್ಲಿ
ರಸನೇಂದ್ರಿಯವಿಷಯದಿಂದೆ ಮತ್ಸ್ಯ ಕೆಡುವುದು
ಜಾಲಗಾರನ ಬಲೆಯಲ್ಲಿ
ನಯನೇಂದ್ರಿಯವಿಷಯದಿಂದೆ ಪತಂಗ ಕೆಡುವುದು
ದೀಪದ [೧]ಜ್ವಾಲೆ[೧]ಯಲ್ಲಿ
ತ್ವಗಿಂದ್ರಿಯವಿಷಯದಿಂದೆ ಎರಳೆ ಕೆಡುವುದು ರಾಜನ ಕೃತಕದಲ್ಲಿ
ಶ್ರವಣೇಂದ್ರಿಯವಿಷಯದಿಂದೆ ಎರಳೆ ಕೆಡುವುದು ಬೇಟೆಗಾರನ ಸರಳಿನಲ್ಲಿ
ಇಂತೀ ಪ್ರಾಣಿಗಳು ಒಂದೊಂದು ವಿಷಯದಿಂದೆ ಬಂಧನಕ್ಕೊಳಗಾದುವು
ಇಂತಪ್ಪ ಪಂಚೇಂದ್ರಿಯವಿಷಯ ವ್ಯಾಪಾರದಲ್ಲಿ ಲಂಪಟರಾದ ಮನುಜರು
ಕೆಟ್ಟ ಕೇಡನೇನೆಂಬೆನಯ್ಯ ಅಖಂಡೇಶ್ವರಾ ೪

ವಿಷಯವೆಂಬ ಕಾಳಗಿಚ್ಚಿನ [೧]ಜ್ವಾಲೆ[೧]ಯಲ್ಲಿ
ಈರೇಳು ಲೋಕವೆಲ್ಲ ಹತವಾಗುತಿರ್ಪುದು ನೋಡಾ
ಅದೆಂತೆಂದೊಡೆ :
ಕುಂಡಲಿಯೆಂಬ ಮಾಯಾಸರ್ಪನು
ತನ್ನ ಬಾಲವ ಬ್ರಹ್ಮರಂಧ್ರಕ್ಕೇರಿಸಿ ನಾಭಿಚಕ್ರವ ಸುತ್ತಿಕೊಂಡು
ಅಧೋಮುಖವಾಗಿ [೨]ಇಂದ್ರಿಯೆಂಬ ವಿಷವ[೨] ಕಾರುತಿಪ್ಪುದು ನೋಡಾ
ಆ [೩]ವಿಷದ[೩] ನಂಜು ತಲೆಗೇರಿದಲ್ಲಿ
ಅಸಿಯ ಜವ್ವನೆಯರ ಸಂಗಸುಖ ಬಹು ಸವಿಯೆಂದು
ತಲೆದೂಗುತಿಪ್ಪುವು ನೋಡಾ ಸಕಲ ಪ್ರಾಣಿಗಳು
ಇದು ಪಶುಪತಿಯು ಮಾಡಿದ ಮಾಯದವಿಧಿಯೆಂದು ತಿಳಿಯದೆ
ಹಸಗೆಟ್ಟುಹೋಯಿತ್ತು ನೋಡಾ ಮೂಜಗವೆಲ್ಲ ಅಖಂಡೇಶ್ವರಾ ೫

---

೧. ಜೋತಿ (ಅ) ೨. ಪಂಚೇಂದ್ರಿಯೆಂಬ ವಿಷಯ (ಅ)
೩. ವಿಷಯ (ಅ)

ಬಣ್ಣದ ಚರ್ಮದ ಹೆಣ್ಣಿನಂಗಸಂಗದ ಕೂಟಸುಖ ಸವಿಯೆಂದು
ಮನವೆಳಸುವ ಕಣ್ಣಗೆಟ್ಟಣ್ಣಗಳು ನೀವು ಕೇಳಿರೋ
ಶುನಿ ಎಲುವ ಕಡಿವಲ್ಲಿ
ತನ್ನ ಬಾಯ ಲೋಳೆ ತನಗೆ ಸವಿದಟ್ಟುತಿಪ್ಪುದಲ್ಲದೆ
ಆ ಎಲುವಿನೊಳಗೇನು ಸಾರ ಸವಿಯುಂಟೇ ?
ತನ್ನ ಊರ್ಧ್ವಬಿಂದು ಮಾಯಾವಶದಿಂದೆ ಅಧೋಗತಿಗಿಳಿದು
ಮೂತ್ರನಾಳ ತಗುಲಿ ಕಿಂಚಿತ್‌ಸುಖ ಉಂಟಾಗುತಿಪ್ಪುದಲ್ಲದೆ
ಆ ಹೆಣ್ಣಿನಿಂದೇನು ಸುಖವುಂಟೇ ? ಎಡ್ಡ ಪ್ರಾಣಿಗಳಿರಾ
ಇಂತೀ ದೃಷ್ಟವ ತಿಳಿದು ಭೇದಿಸಿ ಕಾಣಲರಿಯದೆ
ಹೇಸಿಕೆಯ ಕಿಸುಕುಳದ ಕೀವುತುಂಬಿ ಒಸರುವ ಹಸಿಯ
ತೊಗಲಿನ ಹಳೆಯ ಗಾಯದಲ್ಲಿ
ವಿಷಯಾತುರದಿಂದೆ ಬಿದ್ದು ಮತಿ ಮಸುಳಿಸಿ ಮುಂದುಗಾಣದೆ
ಮುಳುಗಾಡುತಿಪ್ಪುದು ನೋಡಾ ಮೂಜಗವೆಲ್ಲ ಅಖಂಡೇಶ್ವರಾ ೬

ಅಂಡಜ ಇಪ್ಪತ್ತೊಂದು ಲಕ್ಷ ಪಿಂಡಜ ಇಪ್ಪತ್ತೊಂದು ಲಕ್ಷ
ಉದ್ಭಿಜ ಇಪ್ಪತ್ತೊಂದು ಲಕ್ಷ ಜರಾಯುಜ ಇಪ್ಪತ್ತೊಂದು ಲಕ್ಷ
ಇಂತು ಎಂಬತ್ತುನಾಲ್ಕುಲಕ್ಷ ಜೀವರಾಸಿಗಳೊಳಗೆ
ಒಂದೊಂದು ಜನ್ಮದೊಳಗೆ ಸಹಸ್ರ ಸಹಸ್ರವೇಳೆ ಹುಟ್ಟಿಬಂದ
ಅನೇಕ ದುಃಖವಂತಿರಲಿ
ಮುಂದೆ ಮನುಷ್ಯದೇಹವಿಡಿದು ಬಂದ ದುಃಖಮಂ ಪೇಳ್ವೆನದೆಂತೆನೆ:
ತಂದೆಯ ವಿಕಾರದ ದೆಸೆಯಿಂದೆ ಬಂದು ಬಿಂದುರೂಪಾಗಿ
ತಾಯಿಯ ಬಸುರಲ್ಲಿ ನಿಂದು ಒಂಬತ್ತು ತಿಂಗಳ ಪರಿಯಂತರ
ಅವಯವಂಗಳು ಬಲಿದು ಪಿಂಡವರ್ಧನವಾಗಿ
ಕದ್ದಕಳ್ಳನ ಹೆಡಗೈಯ್ಯ ಕಟ್ಟಿ ಸೆರೆಮನೆಯಲ್ಲಿ ಕುಳ್ಳಿರಿಸುವಂತೆ
ಗರ್ಭವೆಂಬ ಸೆರೆಮನೆಯಲ್ಲಿ ಶಿಶುವು
ಮುಚ್ಚಿದ ಕಣ್ಣು ಮುಗಿದ ಬಾಯಾಗಿ ಕುಕ್ಕುಟಾಸನದಲ್ಲಿ ಕುಳ್ಳಿರ್ದು

ಕಡಿವ ಜಂತು[೧]ಜಂಗುಳಿಯ[೧] ಬಾಧೆ
ಸುಡುವ ಜಠರಾಗ್ನಿಯ ಬಾಧೆ
ಎಡದಲ್ಲಿ ಮೂತ್ರದ ತಡಕೆಯ ಬಾಧೆ
ಬಲದಲ್ಲಿ ಅಮೇಧ್ಯದ ಹಡಕೆಯಬಾಧೆ
ಇಂತಿವು ಮೊದಲಾದನಂತಕೋಟಿ ಬಾಧೆಗಳಿಂದೆ
ದಿನದಿನಕ್ಕೆ ದುಃಖಮಂ ಬಡುತಿರ್ದು
ಆಮೇಲೆ ಜಾತಿಸ್ಮರತ್ವ ವುದಯವಾಗಿ
ತನ್ನ ಹಿಂದಣ ಧರ್ಮಕರ್ಮಂಗಳ ಪುಣ್ಯಪಾಪಂಗಳ
ಅರಹು ಮರಹುಗಳನಾರೈದು ನೋಡಿ
ಹಿಂದರಿಯದ ಪಾಪದ ದೆಸೆಯಿಂದೆ ಈ ಗರ್ಭನರಕಕ್ಕೆ ಬಂದೆ.
ಇನ್ನು ಮುಂದೆ ತೆರನೇನೆಂದು ತನ್ನೊಳಗೆ ತಾನೇ ಚಿಂತಿಸಿ
ಸರ್ವರಿಗೆ ಪರಮೇಶ್ವರನೇ ಕರ್ತನು
ಸರ್ವರ ಭವಪಾಶಂಗಳ ಛೇದಿಸುವಾತನು ಪರಮೇಶ್ವರನೆಂದರಿದು
ಮನದಲ್ಲಿ ನಿಶ್ಚೈಸಿಕೊಂಡು, ಆ ಪರಮೇಶ್ವರಂಗೆ ಶಿವಧೋ! ಶಿವಧೋ!!
ಎಂದು ಮೊರೆಯಿಡುತ್ತ ಶಿವಧ್ಯಾನಮಂ ಮಾಳ್ಪ ಸಮಯದಲ್ಲಿ
ಕೋಟಿಸಿಡಿಲು ಹೊಯ್ದಂತೆ ವಿಷ್ಣುಪ್ರಸೂತಿಯೆಂಬ ಗಾಳಿ ಬೀಸಲು
ಅದ ಕಂಡು ಥರಥರನೆನಡುಗಿ ಧ್ಯಾನಪಲ್ಲಟವಾಗಿ ದಿಗ್‌ಭ್ರಮಣೆಗೊಂಡು
ಊರ್ಧ್ವಮುಖವಾಗಿ [೨]ಕುಳಿತಿರ್ದ[೨] ಶಿಶುವು ಗಿರ್ರನೆ ತಿರು[೩]ಗಿ ತಲೆಕೆಳಗಾಗಿ
ಕರ್ತಾರನ ಕಂಬೆ[೪]ಚ್ಚಿನಲ್ಲಿ ಚಿನ್ನದ ಸಲಾಕೆಯ ತೆಗೆವಂತೆ,ಬಚ್ಚಲಹುಳುವಿ
ನಂದದಿ[೫]ಯೋನಿಯೆಂಬ ಸೂಕ್ಷ್ಮದ್ವಾರದಿಂದೆ ಪೊರಮಟ್ಟು ಹುಟ್ಟಿದಲ್ಲಿ,
ಕೋಟಿಬಾಧೆಗಳಿಂದೆ ನೊಂದು ಹವ್ವನೆ ಹಾರಿ ಕಡು ದುಃಖಮುಂಬಟ್ಟು

---

೧. ಹುಳುಗಳ (ಅ,ಕ,ಡ)

೨. ಕುಳುತಿರ್ದ (ಅ,ಬ) ಕುಳ್ಳಿರ್ದ (ಕ,ಡ)

೩. ರಿ (ಅ,ಬ) ೪. ಬ (ಅ) ೫. ವೆ (ಅ)

೧ಪಿಂದಣ[೧] ಜಾತಿಸ್ಮರತ್ವ ಕೆಟ್ಟು ಮತಿ ಮಸುಳಿಸಿ
ತನ್ನ ಮಲಮೂತ್ರಂಗಳಲ್ಲಿ ತಾ ಹೊರಳಾಡಿ
ಬಾಲಲೀಲೆಯ ಸುಖದುಃಖಂಗಳನನುಭವಿಸಿ
ಆ ಬಾಲಲೀಲೆಯು ಹಿಂದುಳಿದ ಮೇಲೆ ಯೌವ್ವನದ ವಯಸ್ಸೊದಗಿದಲ್ಲಿ
ಕಾಮದಲ್ಲಿ ಕರಗಿ ಕ್ರೋಧದಲ್ಲಿ ಕೊರಗಿ
ಮದಮತ್ಸರಂಗಳಲ್ಲಿ ಮುಂದುಗೆಟ್ಟು
ನಾನಾ ವ್ಯಾಪಾರವನಂಗೀಕರಿಸಿ
ಬಂದ ಯೋನಿಯೆಂದರಿಯದೆ
ಉಂಡ ಮೊಲೆಯೆಂದರಿಯದೆ
ಕಾಮವಿಕಾರ ತಲೆಗೇರಿ ವಿಷಯಾತುರನಾಗಿ
ಉಳಿ[೨]ಗಾರನ ದೆಸೆಯಿಂದ ಈಚಲ ಮರ ನಿಸ್ಸಾರವಾದಂತೆ,
ಸ್ತ್ರೀಯರ ಸಂಗದಿಂದೆ ದೇಹದೊಳಗಣ ಊರ್ಧ್ವಬಿಂದು
ಜಾರಿ ಜಾರಿ ಇಳಿದು ಸೋರಿ ಸೋರಿ ಹೋಗಿ ದೇಹವು ನಿಸ್ಸಾರವಾಗಿ
ಯೌವ್ವನದ ಬಲಗೆಟ್ಟು ಮುಪ್ಪಾವರಿಸಿ ಅಚೇತನಗೊಂಡು
ಸರ್ವಾಂಗವೆಲ್ಲ ನೆರಿತೆರೆಗಳಿಂದ ಮುಸುಕಲ್ಪಟ್ಟಾತನಾಗಿ
ಆದಿ ವ್ಯಾಧಿ ವಿಪತ್ತು ರೋಗರುಜೆಗಳಿಂದೆ ಬಹು ದುಃಖಬಟ್ಟು
ಎದೆ ಗೂಡುಗಟ್ಟಿ ಬೆನ್ನು ಬಾಗಿ ಕಣ್ಣು ಒಳನಟ್ಟು
ಶರೀರ ಎಳತಾಟಗೊಂಡು ಕಾಲ ಮೇಲೆ ಕೈಯ್ಯನೂರಿ
ಕೋಲುವಿಡಿದು ಏಳುತ್ತ, ನಾನಾ ಶರದ ದುಃಖ ಧಾವತಿಯಿಂದೆ
ಆತ್ಮ ಕೆಟ್ಟು ನಷ್ಟವಾಗಿ ಹೋಯಿತ್ತು ನೋಡಾ.
ಇದ ಕಂಡು ನಾನಂಜಿ ಮರಳಿ ಜನ್ಮಕ್ಕೆ ಬರಲಾರದೆ
ನಿಮ್ಮ ಮೊರೆಹೊಕ್ಕೆನಯ್ಯ
ಅಖಂಡೇಶ್ವರಾ ೭

ಹರಿಯ ಹತ್ತು ಭವದಲ್ಲಿ ಬರಿಸಿತ್ತು ಮಾಯೆ.
ಬ್ರಹ್ಮನ ತಲೆ[೩]ಯ ಹೋಳು[೩] ಮಾಡಿತ್ತು ಮಾಯೆ.

---

೧. ಹಿಂದಳ (ಅ,ಡ) ೨. ಳ (ಅ,ಬ,ಕ) ೩. ಹೋತನ (ಅ) ಹೋಳನೆ (ಕ)

ಇಂದ್ರಚಂದ್ರರಂಗಕ್ಕೆ ಭಂಗವಿಕ್ಕಿತ್ತು ಮಾಯೆ.
ಗರುಡಗಂಧರ್ವರ ಬರಡುಮಾಡಿತ್ತು ಮಾಯೆ.
ಕಿನ್ನರಕಿಂಪುರುಷರ ಚುನ್ನವಾಡಿತ್ತು ಮಾಯೆ.
ಸಿದ್ಧಸಾಧಕರಿಗೆಲ್ಲ ಗುದ್ದಾಟವನಿಕ್ಕಿತ್ತು ಮಾಯೆ.
ಮನುಮುನಿಗಳನೆಲ್ಲರ ಮನವ ಸೆಳಕೊಂಡು.
ಮರಣಕ್ಕೊಳಗುಮಾಡಿತ್ತು ಮಾಯೆ.
ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕದವರನ್ನೆಲ್ಲ
ಯೋನಿಮುಃಖದಲ್ಲಿ ಹರಿಹರಿದು ನುಂಗಿ ತೊತ್ತಳದುಳಿದಿತ್ತು ಮಾಯೆ
ಮುಕ್ಕಣ್ಣ,ನೀ ಮಾಡಿದ ಮಾಯವಕಂಡು [೧]ಬೆಕ್ಕನೆ[೧] ಬೆರಗಾದೆನಯ್ಯ
ಅಖಂಡೇಶ್ವರಾ ೮

ಬಂಧನಕ್ಕೊಳಗಾದ ಹುಲಿಗೆ ಬಲಾತ್ಕಾರ ಉಂಟೇ ಅಯ್ಯ ?
ಸಂಸಾರದಂದುಗದಲ್ಲಿ ತೊಳಲುವ ಜೀವನಿಗೆ
ಮುಂದೆ ಮುಕ್ತಿಯನರಸುವ ಜ್ಞಾನ ಉಂಟೇ ಅಯ್ಯ ?
ಅಖಂಡೇಶ್ವರಾ ೯

ಕೆಟ್ಟೆಕೆಟ್ಟೆನಯ್ಯ ಒಡಲುಪಾಧಿಯ ಹಿಡಿದು.
ಕೆಟ್ಟೆಕೆಟ್ಟೆನಯ್ಯ ಒಡಲದುರ್ಗುಣದೊಡನಾಡಿ.
ಕೆಟ್ಟೆಕೆಟ್ಟೆನಯ್ಯ ನಿಮ್ಮಡಿಯ ಭಕ್ತಿಯ ಮರೆದು.
ಅಖಂಡೇಶ್ವರಾ ೧೦

ಕಿಸುಃಕುಳದ ಕೀವುರಕ್ತದ, ಒಸೆದು ತುಂಬಿದ ಮಲಮೂತ್ರದ
ರಂಜನಮುಸುಕಿದ ಮಾಂಸ ಅಸ್ತಿಗಳ
ಸುತ್ತಿನ ಹಸನಾದ ಚರ್ಮದ ಹೊದಿಕೆಯ
ಹುಸಿಯ ತನುವ ಮಚ್ಚಿ ಪಶುಪತಿ ನಿಮ್ಮ ನಾನು ಮರೆದೆನಯ್ಯ.
ಅಖಂಡೇಶ್ವರಾ ೧೧

---

೧. ಬೆಚ್ಚನೆ (ಅ) ಬೆಕ್ಕಸನೆ (ಡ)

ಸುಡುಸುಡು ಈ ದೇಹದ ರೂಪು
ನೋಡಿದಡೇನೂ ಹುರುಳಿಲ್ಲವಯ್ಯ
ಎಲುವು ಚರ್ಮ ನರ ಮಾಂಸ ಮಲ ಮೂತ್ರ ಯುಕ್ತವಾದ
ಅನಿತ್ಯದೇಹವ ನಚ್ಚಿ ನಿಮ್ಮ ನಿಜವ ಮರೆದು ಭವಭಾರಿಯಾದೆನಯ್ಯ.
ಅಖಂಡೇಶ್ವರಾ ೧೨

ಭವಕ್ಕೆ ಬೀಜವಾದುದು ತನುವೋ ? ಮನವೋ ?
ಎಂದು ವಿವರಿಸಿ ನೋಡಲು ಮನವೇ ಕಾರಣವಾಗಿಪ್ಪುದರಿಂದೆ
ಈ ಕೆಟ್ಟ ಮನದ ಸಂಗದಿಂದೆ ಮರ್ತ್ಯಲೋಕದಲ್ಲಿ ಹುಟ್ಟಿ,
ತಾಪತ್ರಯಾಗ್ನಿಯಿಂದೆ ಕಂದಿ ಕುಂದಿ ನೊಂದು ಬೆಂದೆನಯ್ಯ.
ಈ ಮನದ ಸಂಗದಿಂದೆ ಭವಭವಂಗಳಲ್ಲಿ ತೊಳಲಿ ಬಳಲಿದೆನಯ್ಯ.
ಈ ಮನದ ಸಂಗದಿಂದೆ ಅನಂತ ಮರವೆಯ ಜೋಹಂಗಳಲ್ಲಿ
ಸೆರೆ ಸಿಕ್ಕಿದೆನಯ್ಯ. ಈ ಮನದ ಸಂಗವ ಬಿಡಿಸಿ ನಿಮ್ಮ ನೆನಹಿನ
ಸಂಗದಲ್ಲಿರಿಸಿ ಸಲಹಯ್ಯ ಎನ್ನ
ಅಖಂಡೇಶ್ವರಾ ೧೪

ಮನವೆಂಬ ಮರ್ಕಟನು ತನುವೆಂಬ ವೃಕ್ಷವನೇರಿ
ಇಂದ್ರಿಯಂಗಳೆಂಬ ಶಾಖೆಶಾಖೆಗೆ ಹಾರಿ
ವಿಷಯಂಗಳೆಂಬ ಹಣ್ಣು ಫಲಂಗಳ ಗ್ರಹಿಸಿ
ಭವದತ್ತ ಮುಖವಾಗಿ ಹೋಗುತಿದೆ ನೋಡಾ
ಈ ಮನವೆಂಬ ಮರ್ಕಟನ ನಿಮ್ಮ ನೆನಹೆಂಬ ಪಾಶದಲ್ಲಿ ಕಟ್ಟಿ
ಎನ್ನನುಳುಹಿಕೊಳ್ಳಯ್ಯ.
ಅಖಂಡೇಶ್ವರಾ ೧೫

ತನುವಿನ ವಿಕಾರದ ಕತ್ತಲೆಯಲ್ಲಿ ಸಿಲ್ಕಿ
ಕಂಗೆಟ್ಟು ಕಳವಳಿಸಿ ತೊಳಲಿ ಬಳಲಿದೆನಯ್ಯ.
ಮನದ ವಿಕಾರದ ಮರವೆಯಲ್ಲಿ ಸಿಲ್ಕಿ
ಮಣ್ಣು ಮಸಿಯಾಗಿ ಬಣ್ಣಗೆಟ್ಟೆನಯ್ಯ.
ತನುಮನದ ವಿಕಾರವ ಮಾಣಿಸಿ
ನಿಮ್ಮ ಭಕ್ತಿಯ ವಿಕಾ[೧]ರದಲ್ಲಿರಿಸಿ ಸಲಹಯ್ಯ ಎನ್ನ
ಅಖಂಡೇಶ್ವರಾ ೧೫

ಮತಿಗೆಟ್ಟೆನಯ್ಯ ಮನದಾಸೆಯ ಕಚ್ಚಿ
ಧೃತಿಗೆಟ್ಟೆನಯ್ಯ ತನುವಿನಾಶೆಯ ಕಚ್ಚಿ
ಈ ತನು ಮನದಾಸೆಯ ಕೆಡಿಸಿ
ನಿಮ್ಮ ಭಕ್ತಿಯ ಲೇಸು[೨] ತೋರಿಸಿ ಬದುಕಿಸಯ್ಯ ಎನ್ನ
ಅಖಂಡೇಶ್ವರಾ ೧೬

ಹಸಿವು ತೃಷೆಯಂಡಲೆಯಾವರಿಸಿ
ಕುಸಿವುತಿರ್ಪುದು ನೋಡಾ ತನುವು
ವಿಷಯ ವಿಕಾರದಂಡಲೆಯಾವರಿಸಿ
ದೆಸೆದೆಸೆಗೆ ನುಸುಳುತಿಪ್ಪುದು ನೋಡಾ ಮನವು
ಈ ತನು ಮನದಲ್ಲಿ ಮುಸುಕಿದ ಮಾಯ ವಾಸ[೩]ನೆಯ[೩] ಕಳೆದು
ನಿಮ್ಮ ಭಕ್ತಿಯ ಲೇಸು[೨] ತೋರಿಸಿ ಬದುಕಿಸಯ್ಯ ಎನ್ನ
ಅಖಂಡೇಶ್ವರಾ ೧೭

ಸಾಕು ಮಾಡದು ಭವಬಂಧನಂಗಳ
ನೂಕಿ ಬಿಡದು ಸಕಲ ಸಂಸಾರವ
ಬೇಕೆಂದೆಳಸುವದು ವಿಷಯಭೋಗಕ್ಕೆ

---

೧. ಚಾ (ದ) ೨. ಸ (ಅ, ಡ)
೩. ನವ (ಅ)

ಶಿವ ಶಿವಾ ಈ ಕಾಕು ಮನಕ್ಕೆ ಏನು[1] ಮಾಡಲಿ?
ಹರ ಹರಾ ಈ ಕಳ್ಳ ಮನಕ್ಕೆ ಎಂತು ಮಾಡಲಿ?
ಅಖಂಡೇಶ್ವರಾ, ನಿಮ್ಮ ಕೃಪಾವಲೋಕನದಿಂದೆ ನೋಡಿ
ಪಾಲಿಪುದಯ್ಯ ಎನ್ನ ನಿಮ್ಮ ಧರ್ಮ ನಿಮ್ಮ ಧರ್ಮ ೧೮

ಸತ್ಯವ ನುಡಿಯದು ಸದಾಚಾರದಲ್ಲಿ ನಡೆಯದು.
ಭಕ್ತಿಯ ಪಿಡಿಯದು ಮುಕ್ತಿಯ ಪಡೆಯದು.
ಸುಡು ಸುಡು ಈ ಮನದ ಯುಕ್ತಿಯ
ಅಖಂಡೇಶ್ವರಾ, ನಿಮ್ಮ ಭಕ್ತಿಯ ಭಾವದಲ್ಲಿರಿಸಿ
ಸಲಹಯ್ಯ ಎನ್ನ. ನಿಮ್ಮ ಧರ್ಮ ನಿಮ್ಮ ಧರ್ಮ ೧೯

ಹುಲಿಯ ಬಾಯಲ್ಲಿ ಸಿಲ್ಕಿದ ಹುಲ್ಲೆಯಂತೆ
ಸರ್ಪನ ಬಾಯಲ್ಲಿ ಸಿಲ್ಕಿದ ಕಪ್ಪೆಯಂತೆ
ಸಕಲ ಲೋಕಾದಿಲೋಕಂಗಳು ಮಾಯಬಲೆಯಲ್ಲಿ ಸಿಲ್ಕಿ
ಸೆರೆಹೋಗುವುದ ಕಂಡು ನಾನಂಜಿ
ನಿಮ್ಮ ಮೊರೆಹೊಕ್ಕೆ ಕಾಯಯ್ಯ ಕಾರುಣ್ಯನಿಧಿಯೇ
ಅಖಂಡೇಶ್ವರಾ ೨೦

ಕಾಲನೆಂಬ ಜಾಲಗಾರನು ಕರ್ಮವೆಂಬ ಬಲೆಯ ಬೀಸಿ
ಸಂಸಾರಶರಧಿಯಲ್ಲಿರ್ಪ ಸಕಲ ಪ್ರಾಣಿಗಳೆಂಬ
ಮೀನುಗಳ ಹಿಡಿದು ಕೊಲ್ಲುತ್ತಿದ್ದಾನೆ[2].
ಕಾಮನೆಂಬ ಬೇಂಟೆಗಾರನು ಕಂಗಳ ತೋಹಿನಲ್ಲಿ ನಿಂದು
ಕಳವಳದ ಬಾಣವನೆಸೆದು ಭವವೆಂಬ ಬಲೆಯಲ್ಲಿ

---

೧. ನ (ಅ, ಬ) ೨. ತೈದಾ (ಅ, ಬ, ಡ)

ಸಕಲ ಪ್ರಾಣಿಗಳ ಕೆಡಹಿಕೊಂಡು ಕೊಲ್ಲು[೧]ತ್ತಿದ್ದಾ[೧]ನೆ.
ಮಾಯೆಯೆಂಬ ರಕ್ಕಸಿ ಸಕಲ ಪ್ರಾಣಿಗಳ ಸಾರವ ಹೀರಿ
ಹಿಪ್ಪೆಯ ಮಾಡಿ ಉಃಫೆಂದು ಊದು[೨]ತ್ತಿದ್ದಾ[೨]ಳೆ.
ಇಂತೀ ತ್ರಿವಿಧಮುಖದಲ್ಲಿ ಕಾಡುವ
ನಿಮ್ಮ ಮಾ[೩]ಯೆಯ[೩] ಗೆಲುವಡೆ ಆರಳವಲ್ಲವಯ್ಯಾ !
ಅಖಂಡೇಶ್ವರಾ, ನೀವು ಕರುಣಿಸದನ್ನಕ್ಕ ೨೧

ಸಿರಿವಂತರೆಂದು ಹೇಳುವವರ ದರಿದ್ರಕ್ಕೆ ಒಳಗು ಮಾಡಿ
ಕಾಡಿತ್ತು ನೋಡಾ ನಿಮ್ಮ ಮಾಯೆ.
ನಿಃಕಾಮಿಗಳೆಂದು ಹೇಳುವವರ ಕಾಮದ ಕತ್ತಲೆಯಲ್ಲಿ ಕೆಡಹಿ
ಕಾಡಿತ್ತು ನೋಡಾ ನಿಮ್ಮ ಮಾಯೆ.
ಪುರುಷನ ಕಣ್ಣಮುಂದೆ ಸ್ತ್ರೀಯಾಗಿ ಸುಳಿದಾಡಿ
ಕಾಡಿತ್ತು ನೋಡಾ ನಿಮ್ಮ ಮಾಯೆ.
ಸ್ತ್ರೀಯ ಕಣ್ಣ ಮುಂದೆ ಪುರುಷನಾಗಿ ಸುಳಿದು
ಕಾಡಿತ್ತು ನೋಡಾ ನಿಮ್ಮ ಮಾಯೆ.
ಸತ್ಯವಂತರೆಂದು ಹೇಳುವವರ ಅಸತ್ಯಕ್ಕೆ ಒಳಗು ಮಾಡಿ
ಕಾಡಿತ್ತು ನೋಡಾ ನಿಮ್ಮ ಮಾಯೆ.
ಹಿರಿಯರೆಂದು ಹೇಳುವವರ [೪]ಕಿರಿಯತನಕ್ಕೆ[೪] ಒಳಗು ಮಾಡಿ
ಕಾಡಿತ್ತು ನೋಡಾ ನಿಮ್ಮ ಮಾಯೆ.
ನಿತ್ಯವೆಂದು ಹೇಳುವವರ ಅನಿತ್ಯಕ್ಕೆ ಒಳಗು ಮಾಡಿ
ಕಾಡಿತ್ತು ನೋಡಾ ನಿಮ್ಮ ಮಾಯೆ.
ಇಂತೀ ಜಗವೆಲ್ಲವ ನುಂಗಿ ಜಾಳಿಸುತಿರ್ಪ
ನಿಮ್ಮ ಮಾಯದೇಳಿಗೆಯ ಗೆಲುವಡೆ ಆರಳವಲ್ಲ ಅಖಂಡೇಶ್ವರಾ,
ನೀವು ಕರುಣ ಹುಟ್ಟಿ ಒಲಿಯದನ್ನಕ್ಕ ೨೨

---

೧. ತೈದಾ (ಅ,ಬ,ಡ) ೨. ತೈದಾ (ಅ,ಬ,ಡ)
೩. ಯವ (ಅ) ೪. ಕಿರಿದಿಗೆ (ಅ,ಡ)

ಎನ್ನ ಕಾಯದ ಕಠಿಣವ ಕಳೆಯಯ್ಯ.
ಎನ್ನ ಜೀವನುಪಾಧಿಯನಳಿಯಯ್ಯ.
ಎನ್ನ ಪ್ರಾಣಪ್ರಪಂಚುವ ತೊಲಗಿಸಯ್ಯ.
ಎನ್ನ ಭಾವದ ಭ್ರಮೆಯ ಕೆಡಿಸಯ್ಯ.
ಎನ್ನ ಮನದ ವ್ಯಾಕುಲವ ಮಾಣಿಸಯ್ಯ
ಎನ್ನ ಕರಣೇಂದ್ರಿಯಂಗಳ ಕಷ್ಟಗುಣವ ನಷ್ಟಮಾಡಯ್ಯ.
ಎನ್ನೊಳಗೆ ನಿಮ್ಮ ಕರುಣಾಮೃತವ ತುಂಬಯ್ಯ ಗುರುವೇ.
ಅಖಂಡೇಶ್ವರಾ ೬೩

ಅಂತು ವಚನಗಳು ೬೩

# ಗುರುಕರುಣಸ್ಥಲ

ಗುರುವೆ ಪರತತ್ತ್ವವು ತಾನೆ ನೋಡಾ
ಗುರುವೆ ಪರವಸ್ತುವು ತಾನೆ ನೋಡಾ
ಗುರುವೆ ಪರಬ್ರಹ್ಮವು ತಾನೆ ನೋಡಾ
ಗುರುವೆ ಪರಶಿವನು ತಾನೆ ನೋಡಾ
ಗುರುವಿನಿಂದೆ ಪರವಿಲ್ಲವೆಂದು ಸಕಲ ಶ್ರುತಿಗಳು
ಹೊ[1]ಗಳುತಿಪ್ಪುವು ನೋಡಾ
ಇಂತಪ್ಪ ಶ್ರೀಗುರುವಿಂಗೆ ನಮೋ ನಮಃ ಎಂಬೆನಯ್ಯ
ಅಖಂಡೇಶ್ವರಾ ೧

ಗುರುವೆನಲು ಕೊರೆವುದು ಜನನ ಮರಣದ ಬೇರ ನೋಡಾ
ಗುರುವೆನಲು ಸುಡುವುದು ಭವಾರಣ್ಯವ ನೋಡಾ
ಗುರುವೆನಲು [2]ಕಡಿವುದು ಭವಕುಜಲತೆಗಳ[2] ನೋಡಾ
[3]ಇಂತಪ್ಪ ಸದ್‌ಗುರುದೇವಂಗೆ[3] ನಮೋ ನಮಃ ಎಂಬೆನಯ್ಯ
ಅಖಂಡೇಶ್ವರಾ ೨

ಗುರುವಚನದಿಂದಲ್ಲದೆ ಭವಪಾಶ ಹರಿಯದು.
ಗುರುವಚನದಿಂದಲ್ಲದೆ ಜಾತಿಭೇದ ಮಾಣದು.
ಗುರುವಚನದಿಂದಲ್ಲದೆ ಸೂತಕಪಾತಕಂಗಳು ಕೆಡದಿಹವು.
ಗುರುವಚನದಿಂದಲ್ಲದೆ ಅಂಗ ಮನ ಪ್ರಾಣಂಗಳು ಶುದ್ಧವಾಗಲರಿಯವು.

---

೧. ಪೊ (ಅ, ಕ)  ೨. ಕೆಡುವುದು ಭವಕ್ಕುಜಲತೆಗಳು(ಅ)
೩. ಇಂತೀ ಸದ್ಗುರುವಿಂಗೆ (ಕ)

ಗುರುವಚನದಿಂದಲ್ಲದೆ ಲಿಂಗಕ್ಕೆ ಕಳೆ ವೇಧಿಸದು.
ಗುರುವಚನದಿಂದಲ್ಲದೆ ಸದ್‌ಭಕ್ತಿ ನೆಲೆಗೊಳ್ಳದು.
ಗುರುವಚನದಿಂದಲ್ಲದೆ ನಿಜಮುಕ್ತಿ ಕಾಣಬಾರದು.
ಇದುಕಾರಣ ಗುರುಮುಟ್ಟಿ ಗುರುವಾದ
ಪರಮ ಶರಣರ ಶ್ರೀ ಚರಣಕ್ಕೆ ಶರಣು ಶರಣೆಂಬೆನಯ್ಯ
ಅಖಂಡೇಶ್ವರಾ ೩

ತಂದೆ-ತಾಯಿ ಬಂಧು-ಬಳಗ ಹೆಂಡರು-ಮಕ್ಕಳು
ತೊತ್ತು-ಬಂಟರುಗಳಿಗೆ ಒಬ್ಬನೇ ಗುರುವು ಒಂದೇ ದೀಕ್ಷೆಯಾದಡೆ
ಅತ್ಯಂತ ಉತ್ತಮವು ನೋಡಾ

ಪತಿ-ಪತ್ನೀ ಭ್ರಾತೃ-ಪುತ್ರ ದಾಸ್ಯೋ ಗೃಹಚರಾಶ್ಚ ಯೇ
ಏಕ ಏವ ಗುರುಸ್ತೇಷಾಂ ದೀಕ್ಷೈ ಕಾ ತು ವಿಶೇಷ್ಯತೇ ॥

ಇದಲ್ಲದೆ ಬಹುಮುಖದ ಗುರುವು ಬಹುಮುಖದ ದೀಕ್ಷೆಯಾದಡೆ
ಅಘೋರನರಕ ತಪ್ಪದಯ್ಯ
ಅಖಂಡೇಶ್ವರಾ ೪

ಎನ್ನ ಭವಪಾಶಂಗಳ ಹರಿದು ಶಿವಸಂಸ್ಕಾರಿಯ ಮಾಡಿದ
ಶ್ರೀಗುರುವಿಂಗೆ ನಮೋ ನಮಃ ಎಂಬೆನಯ್ಯ
ಎನ್ನ ಪೂರ್ವ ಜನ್ಮವನಳಿದು ಪುನರ್ಜಾತನ ಮಾಡಿದ
ಶ್ರೀಗುರುವಿಂಗೆ ನಮೋ ನಮಃ ಎಂಬೆನಯ್ಯ
ಎನ್ನ ಭೂತಕಾಯವ ಕಳೆದು ಮಂತ್ರಶರೀರವ ಮಾಡಿದ
ಶ್ರೀಗುರುವಿಂಗೆ ನಮೋ ನಮಃ ಎಂಬೆನಯ್ಯ
ಎನ್ನ ಹಣೆಯ ದುರ್ಲಿಖಿತವ ತೊಡೆದು ಶಿವಮಂತ್ರವ ಸಂಬಂಧಿಸಿದ
ಶ್ರೀಗುರುವಿಂಗೆ ನಮೋ ನಮಃ ಎಂಬೆನಯ್ಯ
ಎನ್ನ ವಾಯುಪ್ರಾಣಿ[1]ಯೆಂದೆನಿಸದೆ[1] ಲಿಂಗಪ್ರಾಣಿಯೆಂದೆನಿಸಿದ
ಶ್ರೀಗುರುವಿಂಗೆ ನಮೋ ನಮಃ ಎಂಬೆನಯ್ಯ
ಅಖಂಡೇಶ್ವರಾ ೫

೧. ಯ ಕಳೆದು ಶಿವಾ (ಕ)

ಗುರವೇ ನಮೋ ನಮಃ
ಎನ್ನ ಜೀವಭಾವಿಯೆಂದೆನಿಸದೆ ೧ಶಿವ೧ಭಾವಿಯೆಂದೆನಿಸಿದ
ಗುರವೇ ನಮೋ ನಮಃ
ಎನ್ನ ಕಾಲಕಲ್ಪಿತವನಳಿದು ಎನ್ನೊಳಗೆ ಮೂಲ ಮಂತ್ರವ ತೋರಿದ
೨ಗುರವೇ೨ ನಮೋ ನಮಃ
ಎನ್ನ ತನುತ್ರಯಂಗಳಲ್ಲಿ ಮುಸುಕಿದ ಮಲತ್ರಯಂಗಳ ಕಳೆದು
ಲಿಂಗತ್ರಯಗಳ ೩ನೆಲೆಗೊಳಿಸಿದ೩
ಗುರವೇ ನಮೋ ನಮಃ
ಎನ್ನ ಭವಿಜನ್ಮವ ೪ನಳಿ೪ದು
ಭಕ್ತನ ಮಾಡಿ ಮುಕ್ತಿಪಥವ ತೋರಿದ
ಗುರವೇ೨ ನಮೋ ನಮಃ
ಅಖಂಡೇಶ್ವರನೆಂಬ ಅನಾದಿ ಮಹಾಗುರವೇ ನಮೋ ನಮಃ ೬

ಎನ್ನ ಭಾವವ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಮನವ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಕಂಗಳ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಕರಸ್ಥಲವ ಸಿಂಹಾಸನವ ಮಾಡಿದನಯ್ಯ
ಶ್ರೀಗುರು ಪರಮ ಶಿವಲಿಂಗಕ್ಕೆ
ಎನ್ನ ಸರ್ವಾಂಗವ ಸಿಂಹಾಸನವ ಮಾಡಿದ೫
೫ಎನ್ನ ಪರಿಭವವ ತಪ್ಪಿಸಿದ ಶ್ರೀಗುರುವಿಂಗೆ
ನಮೋ ನಮಃ ಎಂಬೆನಯ್ಯ
ಅಖಂಡೇಶ್ವರಾ ೭

---

೧. ಶಿವಾನು (ಅ) ೨. ಶ್ರೀಗುರುವೇ (ಇ) ೩. ಅಳವಡಿಸಿದ (ಇ) ೪. ಕಳೆ (ಇ)
೫. ನಯ್ಯ ಶ್ರೀಗುರು ಪರಮ ಶಿವಲಿಂಗಕ್ಕೆ (ಇ)

ಸಕಲ ವಿಸ್ತಾರದೊಳಗೆಲ್ಲ ಲಿಂಗವ ತೋರಿದ.
ಆ ಲಿಂಗದೊಳಗೆ ಎನ್ನ ತೋರಿದ.
ಎನ್ನೊಳಗೆ ತನ್ನ ತೋರಿದ.
ಮಹಾಗುರುವಿಂಗೆ ನಮೋ ನಮಃ ಎಂಬೆನಯ್ಯ
ಅಖಂಡೇಶ್ವರಾ ೮

ಕಲ್ಪತರು ಕಾ[೧]ಮರನಾಗಬಲ್ಲುದೇನ[೧]ಯ್ಯಾ ?
ಕಾಮಧೇನು ಕಾಡಪಶುವಾಗ[೨]ಬಲ್ಲುದೇನಯ್ಯಾ[೨] ?
ಸಿಂಹದ ಮರಿ ಸೀಳ್ನಾಯಾಗ[೨]ಬಲ್ಲುದೇನಯ್ಯಾ[೨] ?
ಪರಮ ಶ್ರೀಗುರುವಿನ [೩]ಕರಕಮಲದಲ್ಲಿ[೩] ಉದಯರಾದ
ಮಹಾಶರಣರು ಮರಳಿ ನರರಾಗಬಲ್ಲರೇ ಹೇಳಾ ?
ಅಖಂಡೇಶ್ವರಾ ೯

[೪]ಪರುಷ[೪] ಲೋಹದಂತೆ ಮಾಡಿತ್ತೆನ್ನ ಶ್ರೀಗುರುವಿನ ಉಪದೇಶ.
ಉರಿಯುಂಡ ತೃಣದಂತೆ ಮಾಡಿತ್ತೆನ್ನ ಶ್ರೀಗುರುವಿನ ಉಪದೇಶ.
ಕರ್ಪುರದ ಜ್ಯೋತಿಯಂತೆ ಮಾಡಿತ್ತೆನ್ನ ಶ್ರೀಗುರುವಿನ ಉಪದೇಶ.
ಕೀಡಿ [೫]ಕುಂಡಲಿಯಂತೆ[೫] ಮಾಡಿತ್ತೆನ್ನ ಶ್ರೀಗುರುವಿನ ಉಪದೇಶ.
ವಾರಿಕಲ್ಲು ಪುತ್ಥಳಿ ಅಪ್ಪುವನೊಡಗೂಡಿದಂತೆ ಮಾಡಿತ್ತೆನ್ನ
[೬]ಅಖಂಡೇಶ್ವರಾ[೬] ನಿಮ್ಮ ವಚನೋಪದೇಶ ಶ್ರೀಗುರುವಿನ ಉಪದೇಶ. ೧೦

ಬೀಜದಿಂದ ಹುಟ್ಟಿದ ವೃಕ್ಷವು ಬೀಜವ ಹೋಲುವಂತೆ
ತಾಯಿಯಿಂದ ಹುಟ್ಟಿದ ಮಕ್ಕಳು ತಾಯಿಯ ಹೋಲುವಂತೆ
ಧಾನ್ಯಂಗಳಿಂದ ಬೆಳೆದ ಬೆಳಸು ಧಾನ್ಯಂಗಳ ಹೋಲುವಂತೆ
ಗುರುವಿನಿಂದ ಹುಟ್ಟಿದ ಶಿಷ್ಯನು ಗುರು[೭]ರೂಪವಲ್ಲದೆ[೭]
ಬೇರೊಂದು [೮]ರೂಪವಲ್ಲ[೮]ವಯ್ಯ
ಅಖಂಡೇಶ್ವರಾ ೧೧

---

೧. ಕಾಡ ಮರನಾಗಬಲ್ಲುದೆ ಅಯ್ಯಾ (ಬ) ೨. ಬಲ್ಲುದೆ ಅಯ್ಯಾ (ಬ)
೩. ಕಾರುಣ್ಯದಲ್ಲಿ (ಅ) ೪. ಪರುಷ ಮುಟ್ಟಿದ (ಡ, ಇ) ೫. ಕುಂಡಲಿಯಾದಂತೆ (ಇ)
೬. ಭ್ರಮರ ಚಂಪಕದಂತೆ ಅಖಂಡೇಶ್ವರಾ (ಅ) ೭-೮. ರೂಪಲ್ಲ (ಕ, ಇ)

Shanti Sharma Hiremath
"Vedantacharya"



ಸಚ್ಚಿದಾನಂದ ಸದ್‌ಗುರು ತೋರಿದರೆ[೧] ಕಂಡೆನಯ್ಯಾ
ಸತ್ಯಸದಾಚಾರವ.
ಸಚ್ಚಿದಾನಂದ ಸದ್‌ಗುರು ತೋರಿದರೆ[೧] ಕಂಡೆನಯ್ಯಾ
ಭಕ್ತಿ ಜ್ಞಾನ ವೈರಾಗ್ಯವ.
ಸಚ್ಚಿದಾನಂದ ಸದ್‌ಗುರು ತೋರಿದರೆ[೧] ಕಂಡೆನಯ್ಯಾ
ನಿತ್ಯ ಲಿಂಗಾಂಗ[೨]ಸಂಗಸಮರಸವ[೨].
ಸಚ್ಚಿದಾನಂದ ಸದ್‌ಗುರು ತೋರಿದರೆ[೧] ಕಂಡೆನಯ್ಯಾ
ಅಖಂಡೇಶ್ವರಾ,ನಿಮ್ಮ ಶ್ರೀ ಚರಣಕಮಲವ. ೧೨

ಗುರುವಿಡಿದು ಕುರುಹ ಕಾಣಬೇಕು.
[೩]ಕುರುಹುವಿಡಿದು[೩] ಅರುಹ ಕಾಣಬೇಕು.
[೪]ಅರುಹುವಿಡಿದು[೪]ಆಚಾರವ ಕಾಣಬೇಕು.
ಆಚಾರವಿಡಿದು ನಿಜವ ಕಾಣಬೇಕು.
ನಿಜವಿಡಿದು ನ[೫]ಮ್ಮ ಅಖಂಡೇಶ್ವರಲಿಂಗವ ಕೂಡಬೇಕು. ೧೩

ಶ್ರೀಗುರುಸ್ವಾಮಿ ಮಾಡಿದೊಡಾಯಿತ್ತು ಜಗದುತ್ಪತ್ಯ
ಸಚರಾಚರಂಗಳೆಲ್ಲ.
ಶ್ರೀಗುರುಸ್ವಾಮಿ ಮಾಡಿದಡಾಯಿತ್ತು ತತ್ತ್ವಾತತ್ತ್ವ ಸಕಲ
ಸ್ಥಲ[೬]ಕುಲಂಗಳೆಲ್ಲ[೬].
ಶ್ರೀಗುರುಸ್ವಾಮಿ ಮಾಡಿದಡಾಯಿತ್ತು [೭]ನಿಗಮಾಗಮ[೭] ಸಕಲ
ಶಾಸ್ತ್ರ ಜಾಲಂಗಳೆಲ್ಲ.
ಶ್ರೀಗುರುಸ್ವಾಮಿ ಮಾಡಿದಡಾಯಿತ್ತು ಅಖಂಡೇಶ್ವರಾ
ನಾನು ನೀನೆಂಬ [೮]ಉಭಯದ ತೊಡರಂಗಳೆಲ್ಲ[೮]. ೧೪

---

೧. ಡೆ (ಇ) ೨. ಸಾಮರಸ್ಯವ (ಇ) ಸಮರಸವ(ಕ) ೩. ಗುರುವಿಡಿದು (ಡ), ಕುರುಹಿಡಿದು (ಬ), ಕುರುವಿಡಿದು (ಕ). ೪. ಅರುಹಿಡಿದು (ಬ), ಅರುಹ ವಿಡಿದು (ಇ), ಅರುವಿಡಿದು (ಕ), ಗುರುವಿಡಿದು (ಡ). ೫. ನಿ (ಅ, ಡ) ೬. ಸ್ಥಳಕುಳವೆಲ್ಲ(ಅ,ಕ),ಸ್ಥಳಂಗಳನೆಲ್ಲ(ಬ) ಸ್ಥಲಂಗಳೆಲ್ಲ(ಇ)೭. ನಿಗಮಾಗಮಾದಿ(ಅ) ೮. ತೊಡಕು ಭಯಂಗಳನೆಲ್ಲ(ಬ),ತೊಡರುಗಳೆಲ್ಲ(ಡ),ಉಭಯ ತೊಡರಂಗಳೆಲ್ಲ(ಅ)

ಎನ್ನ[೧]ತನುವ[೧] ತನ್ನ [೨]ತನುವ[೨] ಮಾಡಿದನಯ್ಯ ಶ್ರೀಗುರುದೇವನು.
ಎನ್ನ [೩]ಮನವ[೩] ತನ್ನ [೪]ಮನವ[೪] ಮಾಡಿದನಯ್ಯ ಶ್ರೀಗುರುದೇವನು.
ಎನ್ನ [೫]ಪ್ರಾಣವ[೫] ತನ್ನ ಪ್ರಾಣವ ಮಾಡಿದನಯ್ಯ ಶ್ರೀಗುರುದೇವನು.
ಎನ್ನ ಜೀವಕಳೆಯ ತನ್ನ ಜೀವಕಳೆಯ ಮಾಡಿದ
ಶ್ರೀಗುರುದೇವಂಗೆ ನಮೋ ನಮಃ ಎಂಬೆನಯ್ಯ
ಅಖಂಡೇಶ್ವರಾ ೧೫

ಎನ್ನ ತನುವ ಶೋಧಿಸಿ
[೬]ಚಿನುಮಯ[೬] ಲಿಂಗವ ಮಾಡಿ ತೋರಿದನಯ್ಯ ಸದ್ಗುರು.
ಎನ್ನ ಮನವ ಶೋಧಿಸಿ
[೭]ಮನ ಘನ[೭] ಲಿಂಗವ ಮಾಡಿ ತೋರಿದನಯ್ಯ ಸದ್ಗುರು.
ಎನ್ನ ಭಾವವ ಶೋಧಿಸಿ
[೮]ಭಾವ ಭರಿತ[೮] ಲಿಂಗವ ಮಾಡಿ ತೋರಿದನಯ್ಯ ಸದ್ಗುರು.
ಎನ್ನ ಕರಣಂಗಳ ಕಳೆದು ಲಿಂಗ ಕರಣಂಗಳ ಮಾಡಿದ
ಸದ್ಗುರುದೇವಂಗೆ ನಮೋ ನಮಃ ಎಂಬೆನಯ್ಯ
ಅಖಂಡೇಶ್ವರಾ ೧೬

ಎನ್ನ ಕರಸ್ಥಲದಲ್ಲಿ
ಲಿಂಗಮೂರ್ತಿಯಾಗಿ ನೆಲೆಗೊಂಡನಯ್ಯ ಶ್ರೀಗುರುದೇವನು.
ಎನ್ನ ಜಿಹ್ವಾ[೯]ಸ್ಥಲದಲ್ಲಿ
ಮಂತ್ರಮೂರ್ತಿಯಾಗಿ ನೆಲೆಗೊಂಡನಯ್ಯ ಶ್ರೀಗುರುದೇವನು.
ಎನ್ನ ಮನಸ್ಥಲದಲ್ಲಿ
ಸ್ವಾನುಭಾವ ಜ್ಞಾನಮೂರ್ತಿಯಾಗಿ ನೆಲೆಗೊಂಡನಯ್ಯ ಶ್ರೀಗುರುದೇವನು.
ಅಖಂಡೇಶ್ವರಾ ೧೭

---

೧. ತನು (ಬ) ತನುವೆ (ಕ) ೨. ತನು (ಬ) ೩. ಮನ (ಬ), ಮನವೆ (ಕ)
೪. ಮನವೆ (ಕ) ೫. ಪ್ರಾಣವನು (ಅ), ಪ್ರಾಣವನೆ (ಬ), ಪ್ರಾಣವೆ (ಕ)
೬. ತನು (ಬ,ಕ) ೭. ಮನ (ಬ,ಕ) ೮. ಭಾವ (ಬ,ಕ) ೯. ಹ್ವೆ (ಅ,ಬ,ಕ)

ಗುರುಚರಣವ ಪೂಜಿಸಿ ಎನ್ನ ಹಸ್ತಂಗಳು ಪರುಷವಾದುವು.
ಗುರುಚರಣವ ನೋಡಿ ಎನ್ನ ಕಂಗಳು ಪರುಷವಾದುವು.
ಗುರುಚರಣವ ಹಾಡಿ ಹರಸಿ ಎನ್ನ ಜಿಹ್ವೆ ಪರುಷವಾಯಿತ್ತು.
ಗುರುಚರಣವ ನೆನೆದು ಎನ್ನ ಮನ ಪರುಷವಾಯಿತ್ತು.
ಗುರುಚರಣವ ಧ್ಯಾನಿಸಿ ಎನ್ನ ಭಾವ ಪರುಷವಾಯಿತ್ತು ನೋಡಾ
ಅಖಂಡೇಶ್ವರಾ ೧೮

ಆದಿಮಯ ಗುರು ಅನಾದಿಮಯ ಗುರು
ವೇದಮಯ ಗುರು ನಾದಮಯ ಗುರು
ಅಭೇದ್ಯಮಯ ಗುರು ಸಾಧುಸಜ್ಜನ ಸದ್‌ಗುರುವಿಂಗೆ
ನಮೋ ನಮಃ ಎಂಬೆನಯ್ಯ ಅಖಂಡೇಶ್ವರಾ ೧೯

ಸಚ್ಚಿದಾನಂದ ನಿತ್ಯಪರಿಪೂರ್ಣ ಗುರ[1]ವೇ ನಮೋ ನಮಃ
ಸತ್ಯಸದಮಲ [2]ಸಂಜ್ಞೇಯ[2]ಪಂಚಕ ಗುರ[1]ವೇ ನಮೋ ನಮಃ
ಭಕ್ತಿ ಬೆಳಗಿನ ಮುಕ್ತಿಸ್ವರೂಪ ಗುರ[1]ವೇ ನಮೋ ನಮಃ
ಅಖಂಡೇಶ್ವರನೆಂಬ ಬಚ್ಚಬರಿಯ ಬಯಲಬ್ರಹ್ಮವಾದ ಗುರ[1]ವೇ
ನಮೋ ನಮಃ ೨೦

ಎನ್ನ ಕರಕಮಲಮಧ್ಯದಲ್ಲಿ [3]ಪರಮ ನಿರಂಜನದ ಕುರುಹ[3] ತೋರಿದ.
ಆ ಕುರುಹಿನ ಮಧ್ಯದಲ್ಲಿ [4]ಅರುಹಿನ ಕಳೆಯ[4] ತೋರಿದ.
ಆ ಕಳೆಯ ಮಧ್ಯದಲ್ಲಿ ಮಹಾಜ್ಞಾನದ ಬೆಳಗ ತೋರಿದ.
ಆ ಬೆಳಗಿನ ನಿಲವಿನೊಳಗೆ ಎನ್ನ ತೋರಿದ.

---

೧. ರು (ಅ, ಡ) ೨. ಸಂಜ್ಞೆ (ಅ, ಬ, ಕ)
೩. ಮಹಾಜ್ಞಾನದ ಬೆಳಗಿನ ನಿಲವ (ಅ) ೪. ಮಹಾಜ್ಞಾನದ ಬೆಳಗಿನ ನಿಲವ (ಕ)

ಎನ್ನೊಳಗೆ ತನ್ನ ತೋರಿದ.
ತನ್ನೊಳಗೆ ಎನ್ನಿಂಬಿಟ್ಟುಕೊಂಡ ಮಹಾಗುರುವಿಂಗೆ
ನಮೋ ನಮಃ ಎನುತಿರ್ದೆನಯ್ಯ

ಅಖಂಡೇಶ್ವರಾ ೨೧

ಅಂತು ವಚನಗಳು ೫೬

# ಲಿಂಗಧಾರಣ ಸ್ಥಲ



ಅಶ್ವವ ಕೊಂದವನಾದಡಾಗಲಿ
ಪಶುವ ಕೊಂದವನಾದಡಾಗಲಿ
ಬ್ರಾ[೧]ಹ್ಮಣನ ಕೊಂದವನಾದಡಾಗಲಿ
ಶಿಶುವ ಕೊಂದವನಾದಡಾಗಲಿ
ಸ್ತ್ರೀಯ ಕೊಂದವನಾದಡಾಗಲಿ
ಅನಂತ ಪಾತಕಂಗಳ ಮಾಡಿದವನಾದಡಾಗಲಿ
ಶಿವಲಿಂಗದ [೨]ದರ್ಶನ[೨]ವಾ[೩]ದಾಕ್ಷಣದಲ್ಲಿಯೆ[೩]
ಆ ಪಾತಕಂಗಳು ಪಲ್ಲಟವಾಗಿಹವು ನೋಡಾ !

ಅದೆಂತೆಂದೊಡೆ :

"ಅಭಕ್ಷ್ಯ ಭಕ್ಷಕೋ ವಾಪಿ ಬ್ರಹ್ಮಹಾ ಯದಿ ಮಾತೃಹಾ ।
ಪಿತೃಹಾ ಬಾಲಘಾತೀ ಚ ಗೋಘ್ನ ಸ್ತ್ರೀಶೂದ್ರಘಾತಕಃ ॥
ಉಕ್ತಾಚ ಪರದೋಷಸ್ಯ ಪರಸ್ಯ ಗುಣದೂಷಕಃ ।
ಕೃಪಣೋಽನೃತ[೪]ವಾದೀ ಚ ಮಣಿರತ್ನಾಪಹಾರಕಃ ॥
ಸರ್ವಪಾಪಮಯಃ [೫]ಪೂತೋ[೫]ಮುಚ್ಯತೇ ಲಿಂಗದರ್ಶನಾತ್"

ಎಂದುದಾಗಿ

ಪರಮ ಪದವಿಯನೈದುತಿಹನಯ್ಯ

ಅಖಂಡೇಶ್ವರಾ ೧

---

೧. ಬ್ರ (ಅ, ಕ)
೨. ದರುಶನ (ಕ), ದರುಷಣ (ಅ)
೩. ದಕ್ಷಣದಲ್ಲಿ (ಅ, ಕ), ದಕ್ಷಣದಲ್ಲಿಯೆ (ಬ)
೪. ಪ (ಅ, ಕ)
೫. ಪುತ್ರ (ಅ, ಕ, ಇ)

ಜ್ಞಾನದಿಂದಾ[೧]ದಡಾಗಲಿ ಅಜ್ಞಾ[೧]ನದಿಂದಾ[೨]ದಡಾಗಲಿ
ಭೀತಿಯಿಂದಾ[೨]ದಡಾಗಲಿ ನಿರ್ಭೀತಿಯಿಂದಾ[೨]ದಡಾಗಲಿ
ಸದ್ಭಾವದಿಂದಾ[೨]ದಡಾಗಲಿ ದುರ್ಭಾವದಿಂದಾ[೨]ದಡಾಗಲಿ
ಆವ ಪರಿಯಿಂದಾ[೨]ದಡಾಗಲಿ ಪರಮ ಶಿವಲಿಂಗ ದರ್ಶನ ಮಾತ್ರದಿಂದೆ
ಜಾತಿಸ್ಮರತ್ವ ಮಹದೈಶ್ವರ್ಯ ಪರಮಾಯುಷ್ಯ ಶುದ್ಧವಿದ್ಯೆಂಗಳು
ಸಮ್ಯಕ್‌ಜ್ಞಾನ ಸಕಲ[೩]ಸಂಪತ್ತುಗಳು[೩] ದೊರೆಕೊಂಬುವು ನೋಡಾ.

ಅಖಂಡೇಶ್ವರಾ ೨

ಆವ ಜಾತಿಯಲ್ಲಿ ಹುಟ್ಟಿ[೪]ದವ[೪]ನಾದಡಾಗಲಿ
ಶ್ರೀ ಮಹಾದೇವನ ನೆನೆ[೫]ವಾತನಧಿಕ ನೋಡಾ!
ಆತನಿಂದಧಿಕ ಕಂಗಳ ತುಂಬಿ ನೋಡುವಾತ.
ಆತನಿಂದಧಿಕ ಕೈಮುಟ್ಟಿ ಪೂಜಿಸುವಾತ.

ಅದೆಂತೆಂದಡೆ : ಶಿವಧರ್ಮೇ :

"ಲಿಂಗಸ್ಯ ದರ್ಶನಂ ಪುಣ್ಯಂ [೬]ದರ್ಶನಾತ್[೬] ಸ್ಪರ್ಶನಂ ಶುಭಂ ।
ಶಿವಲಿಂಗಂ ಮಹಾಪುಣ್ಯಂ ಸರ್ವದೇವನಮಸ್ಕೃತಂ ॥
ಯಃ [೭]ಸ್ಪೃಶೇದ್ಯಪಿ[೭] ಪಾಣಿಭ್ಯಾಂ ನ ಸಪಾಪೈಃ [೮]ಪರಿಲಿಪ್ಯತೇ[೮]"

ಎಂದುದಾಗಿ

ಅಂತಪ್ಪ ಶಿವಲಿಂಗವನು ಹೆರೆಹಿಂಗದೆ ಅಂಗದ ಮೇಲೆ
[೯]ನಿರಂತರ[೯] ಧರಿಸಿಕೊಂಡಿಪ್ಪಾತನೆ ಎಲ್ಲರಿಂದಧಿಕ ನೋಡಾ.

ಅಖಂಡೇಶ್ವರಾ ೩

---

೧. ಗ್ನಾ (ಅ,ಕ,ಬ) ೨. ದಲಾ (ಆ) ೩. ಸಂಪದಂಗಳು (ಆ)
೪. ದಾತ (ಅ,ಕ) ೫. (ಅ.ಬ,ಕ) ೬. ದರ್ಶನ (ಅ,ಬ)
೭. ಪ್ರಭೇದವ (ಅ,ಬ,ಕ) ೮. ಪ್ರಲೀಯತೇ (ಅ), ಪ್ರವಿಪ್ಯತೆ (ಬ)
೯. ನಿರಂತರದಲ್ಲಿ (ಅ,ಕ)

ಮುನ್ನ ಶ್ರೀಗುರುಸ್ವಾಮಿ ಕರುಣಿಸಿಕೊಟ್ಟ ಇಷ್ಟಲಿಂಗದಲ್ಲಿ
ನೆಟ್ಟನೆ ಅಂಗಮನಪ್ರಾಣಂಗಳು ಸಂಗಿಸಬೇಕು.
ಬಳಿಕ ನಡೆನುಡಿಯಲ್ಲಿ ಆ ಲಿಂಗ ಸನ್ನಿಹಿತವಾ[೧]ಗಿರಬೇಕಲ್ಲದೆ
ಹಿಂಗಿರಲಾಗದು.
ಕೊಡುಕೊಂಬ ವ್ಯವಹಾರದಲ್ಲಿ ಆ ಲಿಂಗ ಸನ್ನಿಹಿತವಾ[೧]ಗಿರಬೇಕಲ್ಲದೆ
ಹಿಂಗಿರಲಾಗದು.
ಜಾಗ್ರಸ್ವಪ್ನಸುಷುಪ್ತಿಗಳಲ್ಲಿ ಆ ಲಿಂಗ ಸನ್ನಿಹಿತವಾ[೧]ಗಿರಬೇಕಲ್ಲದೆ
ಹಿಂಗಿರಲಾಗದು.
ಶುಚಿ ಅವಶುಚಿಯಲ್ಲಿ ಆ ಲಿಂಗ ಸನ್ನಿಹಿತವಾ[೧]ಗಿರಬೇಕಲ್ಲದೆ
ಹಿಂಗಿರಲಾಗದು.
ಅದೆಂತೆಂದೊಡೆ :

"ಗಚ್ಛನ್ ತಿಷ್ಠನ್ ಸ್ವಪನ್ ಜಾಗ್ರನ್ ಉನ್ಮಿಷನ್ ನಿಮಿಷನ್ನಪಿ ।
ಶುಚಿರ್ವಾಪ್ಯಶುಚಿರ್ವಾಪಿ ಲಿಂಗಂ ಸರ್ವತ್ರ ಧಾರಯೇತ್ ॥"

ಎಂದುದಾಗಿ

ಸರ್ವಾವಸ್ಥೆಯಲ್ಲಿ ಲಿಂಗಸನ್ನಿಹಿತವಾಗಿರಬೇಕಲ್ಲದೆ
[೨]ನಿಮಿಷ[೨]ನಿಮಿಷಾರ್ಧ ಲಿಂಗವನಗಲಿದರೆ[೩]
ಕುಂಭಿನಿಪಾತಕ ನಾಯಕನರಕ ತಪ್ಪದು ನೋಡಾ !

ಅಖಂಡೇಶ್ವರಾ ೪

ಸಕಲೇಂದ್ರಿಯಂಗಳ ಪ್ರಪಂಚು ನಾಸ್ತಿಯಾಗಿರಬಲ್ಲರೆ[೩]
[೪]ಕಕ್ಷದಲ್ಲಿ[೪]ಧರಿಸುವುದಯ್ಯ ಶಿವಲಿಂಗವ.
ಕಾಂಚನಕ್ಕೆ ಕೈಯಾನದಿದ್ದರೆ[೩] ಕರಸ್ಥಲದಲ್ಲಿ ಧರಿಸುವುದಯ್ಯ ಶಿವಲಿಂಗವ.
ಪರಸ್ತ್ರೀಯರ ಅಪ್ಪುಗೆ ಇಲ್ಲದಿರ್ದಡೆ
ಉರಸ್ಥಲದಲ್ಲಿ ಧರಿಸುವುದಯ್ಯ ಶಿವಲಿಂಗವ.

---

೧, ನಾ (ಅ) ೨. ನಿಮಿಷ (ಅ) ೩ ಡೆ (ಇ)
೪ ಕಕ್ಷೆಯಲ್ಲಿ (ಅ, ಬ)

ಎಂದೆಂದು ಹುಸಿಯ[೧]ನಾಡ[೧]ದಿರ್ದಡೆ
ಜಿಹ್ವೆಯ ಪೀಠದಲ್ಲಿ ಧರಿಸುವುದಯ್ಯ ಶಿವಲಿಂಗವ.
ಅನ್ನಪಾನಂ[೨]ಗಳಿಗೆ ಬಾಯ್ತೆ[೩]ರೆಯದಿರ್ದಡೆ
ಅಮಳ್ಳೈಕ್ಯದಲ್ಲಿ ಧರಿಸುವುದಯ್ಯ ಶಿವಲಿಂಗವ.
ಅನ್ಯ ರಾಜರಿಗೆ ತಲೆವಾಗದಿರ್ದಡೆ
ಉತ್ತಮಾಂಗದಲ್ಲಿ ಧರಿಸುವುದಯ್ಯ ಶಿವಲಿಂಗವ.
ಇಂತೀ ಷಡ್ವಿಧಾಚಾರ ನೆಲೆಗೊಂಡು
ಷಡ್ವಿಧಸ್ಥಾನದಲ್ಲಿ ಶಿವಲಿಂಗವ ಧರಿಸಬಲ್ಲರೆ[೪]
[೫]ಭಕ್ತ[೫]ನೆಂಬೆನು. [೬]ಮಹೇಶ್ವರ[೬]ನೆಂಬೆನು. [೭]ಪ್ರಸಾದಿ[೭]ಯೆಂಬೆನು.
[೮]ಪ್ರಾಣಲಿಂಗಿ[೮]ಯೆಂಬೆನು. [೯]ಶರಣ[೯]ನೆಂಬೆನು. [೧೦]ಐಕ್ಯ[೧೦]ನೆಂಬೆನು.
ಇಂತೀ ಭೇದವನರಿಯದೆ ಲಿಂಗವ ಧರಿಸಿದರೆ[೪]
[೧೧]ಉಡಿಲಲ್ಲಿ[೧೧]ಕಲ್ಲ ಕಟ್ಟಿಕೊಂಡು ಕಡಲ ಬಿದ್ದಂತಾಯಿತ್ತು ಕಾಣಾ !
ಅಖಂಡೇಶ್ವರಾ ॥

ಆರು ಸಾಧಿಸಬಾರದ ವಸ್ತುವ ಸಾಧಿಸಿ ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ.
ಆರು ಭೇದಿಸಬಾರದ ವಸ್ತುವ ಭೇದಿಸಿ ತಂದುಕೊಟ್ಟನಯ್ಯ
[೧೨]ಶ್ರೀಗುರುವೆ[೧೨]ನ್ನ ಕರಸ್ಥಲಕ್ಕೆ.
ಆರು ನೋಡಬಾರದ ವಸ್ತುವ ನೋಡೆಂದು ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ.

---

೧. ನುಡಿಯ (ಅ) ೨. ನಾದಿ (ಅ, ಡ) ೩. ದೆ (ಅ, ಬ)
೪. ಡೆ (ಅ) ೫. ಸದ್ಭಕ್ತ (ಅ) ೬. ವೀರಮಾಹೇಶ್ವರ (ಅ)
೭. ಪರಮಪ್ರಸಾದಿ (ಅ) ೮. ಅವಿರಳ ಪ್ರಾಣಲಿಂಗಿ (ಅ)
೯. ಗಂಭೀರ ಶರಣ (ಅ) ೧೦. ನಿಜಲಿಂಗೈಕ್ಯ (ಅ)
೧೧. ಉಡಲಲ್ಲಿ (ಬ), ಮಡಲಲ್ಲಿ (ಅ), ಮಡುವಿನಲ್ಲಿ (ಕ), ಒಡಲಲ್ಲಿ (ಡ)
೧೨. ಶ್ರೀಗುರುದೇಶಿಕನೆ (ಅ)

ಆರು ಹಾಡಬಾರದ ವಸ್ತುವ ಹಾಡೆಂದು ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ.
ಆರು ಕೂಡಬಾರದ ವಸ್ತುವ ಕೂಡೆಂದು ತಂದುಕೊಟ್ಟನಯ್ಯ
ಶ್ರೀಗುರುವೆನ್ನ ಕರಸ್ಥಲಕ್ಕೆ.
ಎನ್ನ ಕರಸ್ಥಲದಲ್ಲಿ ಮೂರ್ತಿಗೊಂಡು ಬೆಳಗುವ ಪರಬ್ರಹ್ಮವ
ಎನ್ನ ಕಂಗಳು ತುಂಬಿ ನೋಡಿ, ಕೈಮುಟ್ಟಿ ಪೂಜಿಸಿ,
ಜಿಹ್ವೆತುಂಬಿ ಕೊಂಡಾಡಿ, ಮನತುಂಬಿ ಅಪ್ಪಿ
ಅಗಲದೆ ಇಪ್ಪೆನಯ್ಯ ಅಖಂಡೇಶ್ವರಾ ! ೬

ಅಂಧಕಂಗೆ ಕಣ್ಣು ಬಂದಂತೆ; ಹೆಳವಂಗೆ ಕಾಲು ಬಂದಂತೆ;
ಬಂಜೆಗೆ ಮಗನಾದಂತೆ; ನಿರ್ಧನಿಕಂಗೆ [1]ನಿಧಾನವು[1] ಸೇರಿದಂತೆ;
ಮರಣುಳ್ಳವಂಗೆ ಮರುಜೇವಣಿಗೆ ದೊರೆಕೊಂಡಂತೆ;
ಅಖಂಡೇಶ್ವರಾ, ನೀವೆನ್ನ ಕರಸ್ಥಲಕ್ಕೆ ಬಂದ ಫಲವು ಇಂತುಂಟಯ್ಯಾ ! ೭

ಜಗವನೊಳಕೊಂಡ ಲಿಂಗವು
ಸೊಗಸಿಂದೆ ಎನ್ನ ಕರಸ್ಥಲಕ್ಕೆ ಬಂದಿರಲು
ಕಂಡು ಹಗರಣವಾ[2]ಯಿತ್ತೆನಗೆ[2].
ಗುರು ಲಿಂಗ ಜಂಗಮಸ್ವರೂಪವಾಗಿ ಮೂರ್ತಿಗೊಂಡಿತ್ತು ನೋಡಾ.
ಅಹಾ ಎನ್ನ ಪುಣ್ಯವೇ! ಅಹಾ ಎನ್ನ ಭಾಗ್ಯವೇ !
ಅಹಾ ಅಖಂಡೇಶ್ವರಾ, ನಿಮ್ಮ ಘನವ ಕಂಡು
ಎನ್ನ ಮನಕ್ಕೆ ಮಂಗಳವಾಯಿತ್ತು ನೋಡಾ. ೮

ಅಣುವಿಂಗೆ ಅಣು ಮಹತ್ತಿಂಗೆ ಮಹತ್ತೆಂದೆನಿಸುವ[3]ದೇವನ[3]
ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.

---

೧. ಧನವು (ಬ, ಡಾ), ಧನವು ಕೈ (ಕ) ೨. ದೆನಯ್ಯಾ (ಅ)
೩. ಲಿಂಗದೇವನ (ಬ, ಡ)

ಉಪಮಾತೀತ ವಾಙ್ಮನಕ್ಕಗೋಚರನೆಂದೆನಿಸುವ ದೇವನ
ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.
ಶ್ರುತಿತತಿಯ ಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನೆಂದೆನಿಸುವ ದೇವನ
ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.
ಭಾವಭರಿತ ಜ್ಞಾನಗಮ್ಯನೆಂದೆನಿಸುವ ದೇವನ
ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.
ಅಖಂಡೇಶ್ವರನೆಂಬ ಅನಾದಿ ಪರಶಿವನ
ಕಂಡೆನಯ್ಯ ಎನ್ನ ಕರಸ್ಥಲದಲ್ಲಿ. ೯

ಮನಕ್ಕೆ ಮನೋಹರವಾದ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.
ಕಂಗಳಿಗೆ ಮಂಗಳವಾದ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.
ಪ್ರಾಣಕ್ಕೆ ಪರಿಣಾಮವಾದ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.
ತನುವಿಂಗೆ ತರಹರವಾದ ದೇವನ ಕಂಡೆನಯ್ಯ ಎನ್ನ ಕರಸ್ಥಲದಲ್ಲಿ.
ಅಗಮ್ಯ ಅಗೋಚರನಾದ ಅಖಂಡೇಶ್ವರನೆಂಬ [1]ಲಿಂಗ[1]ಯ್ಯನ
ಕಂಡೆನಯ್ಯ ಎನ್ನ ಕರಸ್ಥಲದಲ್ಲಿ. ೧೦

ಶಿವಶಿವಾ ಎಂದು ಶಿವನ ನೆನೆದು ಭವದ ಬೇರ ಕಿತ್ತೊಗೆಯಿರೋ.
ಪರಶಿವಮೂರ್ತಿ ಪರಬ್ರಹ್ಮಲಿಂಗವಪೂಜಿಸಿ
ಹರಿ ಹತ್ತು ಭವವ ನೀಗಿದ, ಅಜ ಅನಂತ [2]ಕಲ್ಪವ[2] ಮೀರಿದ;
ಸುಜನ ಮುನಿಗಳು ನಿಜಪದವನ್ನೈದಿದರು ನೋಡಿರೋ
ನಮ್ಮ ಅಖಂಡೇಶ್ವರ ಲಿಂಗದಲ್ಲಿ. ೧೧

ಮುನ್ನ ವಿಟಶ್ವೇತನು ಶಿವ ಎಂಬ ಶಬ್ದದಿಂದೆ
ಕಾಲನ ಕಂಟಕವ ಗೆಲಿದು ನೀಲಲೋಹಿತನ ಓಲಗದಲ್ಲಿರಲಿಲ್ಲವೇ ?
ಮುನ್ನ ಸುಕುಮಾರನು ಪರಶಿವಲಿಂಗ ದರ್ಶನದಿಂದೆ

---

೧. ದೇವನ (ಅ) ೨. ಕಲ್ಪಿತವ (ಅ, ಕ) ೩ ವಾ (ಅ, ಬ, ಕ)

ಯಮನಪುರಿಯ ಬಾಧೆಯ ನೀಗಿ ಹರನ ರಜತಾದ್ರಿಯಲ್ಲಿರಲಿಲ್ಲವೇ ?
ಮುನ್ನ ಮಾರ್ಕಂಡೇಯನು ಪರಬ್ರಹ್ಮಲಿಂಗವ ಪೂಜಿಸಿ
ಯಮನ[1]ಉರ[1]ಹರಿದು ಹರನ ಕೈವಲ್ಯವ [2]ಪಡೆಯಲಿಲ್ಲವೇ[2] ?
ಇದನರಿತು ಸ್ಥಿರವಾಗಿ ಪೂಜಿಸಿ ವರವ ಬೇಡಿರೋ
ನಮ್ಮ ಅಖಂಡೇಶ್ವರ ಲಿಂಗದೇವನ. ೧೨

ಹಾಡಿರೋ ಜಿಹ್ವೆ ದಣಿಯದೆ ಲಿಂಗವ.
ನೋಡಿರೋ ಕಂಗಳು ದಣಿಯದೆ ಲಿಂಗವ.
ಮಾಡಿರೋ ಪೂಜೆಯ ಹಸ್ತ ದಣಿಯದೆ ಲಿಂಗವ.
ಬೇಡಿರೋ ವರವ ಮನಬಂದ ಪರಿಯಲ್ಲಿ ನಮ್ಮ ಅಖಂಡೇಶ್ವರಲಿಂಗವ. ೧೩

ನಂದಿವಾಹನನಾಗಿ ಚಂದ್ರಸೂರ್ಯಾಗ್ನಿನೇತ್ರದ ಅಂದ ಉಳ್ಳಾತನಾಗಿ
ಸಂದಣಿಯಾಗಿ ನೆರೆದ ಪ್ರಮಥಗಣವೃಂದ ಉಳ್ಳಾತನಾಗಿ
ನಿಂದು ಓಲೈಸುವ ದೇವಸಭೆಯ ಮುಂದೆ ಉಳ್ಳಾತನಾಗಿ
ದುಂದುಭಿಯ ನಾದ ಮೊಳಗುತ್ತ
ಕೋಟಿ ಕಂದರ್ಪನ ಸೌಂದರ್ಯವನೊಳಕೊಂಡು ಬಂದಿರಯ್ಯ
ಎನ್ನ ಕರಸ್ಥಲಕ್ಕೆ ಅಖಂಡೇಶ್ವರಾ. ೧೪

ಪಂಚಮುಖ ದಶಪಂಚನೇತ್ರ ದಶಭುಜ ಎಸೆವ ಕೆಂಜೆಡೆಗಳ
ಶಶಿಮೌಳಿ ದಶದಿಗ್ಭರಿತ ಅಗ್ರಗಣ್ಯ ಅಗೋಚರ ವ್ಯಾಘ್ರಚರ್ಮಾಂಬರ
ಭರ್ಗೋದೇವನೆನಿಸಿ ಬಂದಿರಯ್ಯ ಎನ್ನ ಕರಸ್ಥಲಕ್ಕೆ ಅಖಂಡೇಶ್ವರಾ. ೧೫

ಹರಿನಯನವ [4]ಚರಣಕಮಲದಲ್ಲಿ[4] ಧರಿಸಿ
ಶಿರಮಕುಟದಲ್ಲಿ ಹರಿವ ಗಂಗೆಯ ತಾಳಿ

---

೧. ಉರಲ (ಅ, ಬ, ಕ) ೨. ಪಡೆಯನೇ (ಅ, ಬ), ಪಡದನು (ಕ)
೩. ವಾ (ಅ, ಬ, ಕ) ೪. ಚರಣದಲ್ಲಿ (ಅ, ಬ, ಕ)

ಅಸುರರ ಶಿರಗಳ ಕೊರಳ ಹಾರವ ಮಾಡಿ
ಅಜಶಿರಪಾತ್ರವ ಕರಮಧ್ಯದೊಳಗಿರಿಸಿ
ಗಜಚರ್ಮಾಂಬರ ಭುಜಗಭೂಷಣನೆನಿಸಿ
ತ್ರಿಜಗವ ಪಾಲಿಸುತ್ತ ಬಂದಿರಯ್ಯ ಎನ್ನ ಕರಸ್ಥಲಕ್ಕೆ ಅಖಂಡೇಶ್ವರಾ ೧೬

ವಿಶ್ವತೋ ಮುಖ ವಿಶ್ವತೋ ಪಾದ
ವಿಶ್ವತೋ ಬಾಹು ವಿಶ್ವತೋ ಚಕ್ಷು
ವಿಶ್ವತೋ ವ್ಯಾಪಕನೆನಿಸಿ ಬಂದಿರಯ್ಯ ಎನ್ನ ಕರಸ್ಥಲಕ್ಕೆ ಅಖಂಡೇಶ್ವರಾ ೧೭

ಸಾಲೋಕ್ಯವಿದೆ ಸಾಮೀಪ್ಯವಿದೆ
ಸಾರೂಪ್ಯವಿದೆ ಸಾಯುಜ್ಯವಿದೆ
ಚತುರ್ವಿಧ ಫಲಪುರುಷಾರ್ಥವಿದೆ
ಸುರತರುವಿದೆ ಸುರ[1]ಧೇನು[1]ವಿದೆ
ವರಚಿಂತಾಮಣಿಯಿದೆ ಪರುಷದ ವಾರಿಧಿಯಿದೆ
ಸಂಜೀವನವಿದೆ ಜ್ಞಾನವಿದೆ ಮೋಕ್ಷವಿದೆ
ಪರತರ ಪರಮ ಪದವಿದೆ ಪರಶಿವ [2]ಪರಂಜ್ಯೋತಿ ಬ್ರಹ್ಮ[2]ವಿದೆ
ಎನ್ನ ಕರಸ್ಥಲದಲ್ಲಿ ಮೂರ್ತಿಗೊಂಡ ಅಖಂಡೇಶ್ವರ ಲಿಂಗವಿದೆ ೧೮

ಸತ್ತುಚಿತ್ತಾನಂದ ನಿತ್ಯಪರಿಪೂರ್ಣವಾದ ಪರವಸ್ತುವು
ಪ್ರತ್ಯಕ್ಷವಾಗಿ ಎನ್ನ ಕರಸ್ಥಲಕ್ಕೆ ಬಂದಿರಲು ಬಳಿಕ
ಇನ್ನೆಲ್ಲಿಯದಯ್ಯ ಎನಗೆ ಜಪತಪದ ಚಿಂತೆ ?
ಇನ್ನೆಲ್ಲಿಯದಯ್ಯ ಎನಗೆ ನೇಮದಿತ್ಯದ ಚಿಂತೆ ?
ಇನ್ನೆಲ್ಲಿಯದಯ್ಯ ಎನಗೆ ಮೌನಮುದ್ರೆಯ ಚಿಂತೆ ?
ಅಖಂಡೇಶ್ವರ ಲಿಂಗವು ಎನ್ನೊಳಹೊರಗೆ ತಾನಾದ ಬಳಿಕ
ಇನ್ನೆಲ್ಲಿಯದಯ್ಯ ಎನಗೆ ಬೇರೆ ತತ್ತ್ವವನರಿಯಬೇಕೆಂಬ ಚಿಂತೆ ? ೧೯

---

೧. ಪಶು (ಅ) ೨. ಬ್ರಹ್ಮಪರಂಜ್ಯೋತಿ (ಅ, ಕ)

ಶಿವ ಶಿವಾ ಮಹಾಪ್ರಸಾದ !
ಎನ್ನ ಚರಣವು ನಿಮ್ಮ ಶಿವಾಚಾರ ಮಾರ್ಗದಲ್ಲಲ್ಲದೆ
ಅನ್ಯ ಮಾರ್ಗದಲ್ಲಿ ಚರಿಸದಂತೆ ಮಾಡಯ್ಯ.
ಎನ್ನ ಹಸ್ತವು ನಿಮ್ಮನಲ್ಲದೆ ಅನ್ಯವ ಮುಟ್ಟದಂತೆ ಮಾಡಯ್ಯ.
ಎನ್ನ ಕಂಗಳು ನಿಮ್ಮನಲ್ಲದೆ ಅನ್ಯವ ನೋಡದಂತೆ ಮಾಡಯ್ಯ.
ಎನ್ನ ಶ್ರೋತ್ರವು ನಿಮ್ಮ [೧]ಕೀರ್ತನೆಯನಲ್ಲದೆ
ಅನ್ಯವ ಕೇಳದಂತೆ ಮಾಡಯ್ಯ.
ಎನ್ನ ಜಿಹ್ವೆಯು ನಿಮ್ಮನಲ್ಲದೆ ಅನ್ಯರ ಹೊಗಳದಂತೆ ಮಾಡಯ್ಯ.
ಎನ್ನ ಮನವು ನಿಮ್ಮನಲ್ಲದೆ ಅನ್ಯವ ನೆನೆಯದಂತೆ ಮಾಡಯ್ಯ.
ಎನ್ನ ಭಾವವು ನಿಮ್ಮನಲ್ಲದೆ ಅನ್ಯವ ಬಯಸದಂತೆ ಮಾಡಯ್ಯ.
ಅಖಂಡೇಶ್ವರಾ ೨೦

ಬಾರಯ್ಯ ಬಾರಯ್ಯ ಭಕ್ತದೇಹಿಕ ದೇವನೆ.
ಬಾರಯ್ಯ ಬಾರಯ್ಯ ಭಕ್ತಿವತ್ಸಲನೆ.
ಬಾರಯ್ಯ ಬಾರಯ್ಯ ಭಕ್ತಜನ ಪ್ರಿಯನೆ.
ಬಾರಯ್ಯ ಬಾರಯ್ಯ ಭಕ್ತಜನ ಬಂಧುವೆ.
ಬಾರಯ್ಯ ಬಾರಯ್ಯ ಭಕ್ತಜನ ಮನೋವಲ್ಲಭನೆ.
ಬಾರಯ್ಯ ಬಾರಯ್ಯ ಅಖಂಡೇಶ್ವರಾ, ನೀ ಎನ್ನ
ಪರಮ ಹೃದಯಮಂದಿರಕ್ಕೆ. ೨೧

## ಅಂತು ವಚನಗಳು ೭೭

---

೧. ಕೀರ್ತಿ (ಅ, ಕ, ಡ)

## ವಿಭೂತಿ ಸ್ಥಲ

'ಶಿವ ಶಿವಾ' ಎಂದು ಶಿವನ ಕೊಂಡಾಡುತ್ತ ಶ್ರೀ ವಿಭೂತಿಯ ಧರಿಸಿ,
ಶ್ರೀ ಮಹಾದೇವನ ಪೂಜಿಸುವಾತನ ¹ಕಾಯವೇ¹ ಕೈಲಾಸ.
ಆತನ ನಡೆಯೇ ಪಾವನ.
ಆತನ ನುಡಿಯೇ ²ಆಗಮ².
ಆತನ ದರುಶನ ಸ್ಪರುಶನವೇ
ಸಕಲ ಪ್ರಾಣಿಗಳಿಗೆ ಸಾಲೋಕ್ಯಪದವು³ ನೋಡಾ!
ಆ ಮಹಾತ್ಮನಿಂದಧಿಕರು ಮೂಲೋಕದೊಳಗಿಲ್ಲ ನೋಡಾ!
ಅಖಂಡೇಶ್ವರಾ ೧

ಹೀನಜಾತಿಯಲ್ಲಿ ಹುಟ್ಟಿದ ಮಾನವನಾದಡಾಗಲಿ
ಶಿವಧ್ಯಾನದಿಂದ ನೊಸಲಲ್ಲಿ ಶ್ರೀ ವಿಭೂತಿಯ ಧರಿಸಿದಾತನ
ಏನೆಂದು ಉಪಮಿಸಬಹುದಯ್ಯ?
ಆತನಲ್ಲಿ ಜ್ಞಾನಪರೀಕ್ಷೆಯ ಮಾಡಲಾಗದು.
ಆತನಲ್ಲಿ ⁴ವ್ರತವ⁴ ಪರೀಕ್ಷೆಯ ಮಾಡಲಾಗದು.
ಆತನು ಮಹಾಪೂಜ್ಯನು ನೋಡಾ!
ಅದೆಂತೆಂದೊಡೆ :

"ತಸ್ಮಿನ್ ಜ್ಞಾನಂ ಪರೀಕ್ಷೇತ ನ ಕುಲಂ ನ ವ್ರತಂ ತಥಾ ।
ತ್ರಿಪುಂಡ್ರಾಂಕಿತಭಾಲೇನ ಪೂಜ್ಯ ಏವ ಹಿ ನಾರದ ॥"

ಎಂದುದಾಗಿ
ಆ ಘನಮಹಿಮ ಇಹಪರಕೆ ಶ್ರೇಷ್ಠನು ನೋಡಾ!
ಅಖಂಡೇಶ್ವರಾ ೨

---

೧. ಕಾಯಕ (ಅ, ಇ) ೨. ಪಾವನ (ಕ, ಡ) ೩. ವಿ (ಕ, ಡ)
೪. ಕುಲವ (ಬ, ಇ)

ಹರಿಕುಲದ ವಿಪ್ರರು ಶ್ರೀ ವಿಭೂತಿಯ ಧರಿಸದೆ
ಮೋಕ್ಷ ಮಾರ್ಗಕ್ಕೆ ತಪ್ಪುᶦಗᶦᶦರಾದರು ನೋᶦᶦಡಾ !
ಸಕಲ ವೇದಂಗಳು ಶ್ರೀ ವಿಭೂತಿಯೇ ಘನವೆಂದು
ಕರವೆತ್ತಿ ಕೂಗುತಿಪ್ಪುವು ನೋಡಾ !
ಸಕಲ ಶ್ರುತಿಗಳು ಶ್ರೀ ವಿಭೂತಿಯ ಮಹತ್ವವನೆ
ಹೊಗಳುತಿಪ್ಪುವು ನೋಡಾ !
ಸಕಲ ಸ್ಮೃತಿಗಳು ಶ್ರೀ ವಿಭೂತಿಯ ಮಹಿಮೆಯನೆ
ಉಗ್ಗಡಿಸುತಿಪ್ಪುವು ನೋಡಾ !
ಅಖಿಲ ಪುರಾಣಂಗಳು ಶ್ರೀ ವಿಭೂತಿಯೇ ಅಧಿಕವೆಂದು
²ಹೊಗಳು²ತಿಪ್ಪುವು ನೋಡಾ !
ಅದೆಂತೆಂದೊಡೆ : ಗಾರುಡೇ

"ಶ್ರುತಯಃ ಸ್ಮೃತಯಃ ಸರ್ವಾಃ ಪುರಾಣಾನ್ಯಖಿಲಾನ್ಯಪಿ ।
ವದಂತಿ ಭೂತಿಮಾಹಾತ್ಮ್ಯಂ ತತಸ್ತಾಂ ಧಾರಯೇತ್ ದ್ವಿಜಃ ॥

ಎಂದುದಾಗಿ

ಇಂತಪ್ಪ ಶ್ರೀ ವಿಭೂತಿಯ ಧರಿಸಲೊಲ್ಲದೆ
ಮಣ್ಣು ಮಟ್ಟಿಯ ಹಣೆಗಿಟ್ಟುಕೊಂಬ ಮಧ್ವಮತದ
ಚಾಂಡಾಲ ಹೊಲೆಯ ವಿಪ್ರ ಹಾರುವರೆಂಬ
ಅಧಮ ಮಾದಿಗರನೆನಗೊಮ್ಮೆ ತೋರದಿರಯ್ಯ
ಅಖಂಡೇಶ್ವರಾ ೩

ಆವ ಕಾರ್ಯಕ್ಕಾದಡೂ ಶ್ರೀ ವಿಭೂತಿಯೇ ಬೇಕು.
ಆವ ಕ್ರಿಯೆಗಾದಡೂ ಶ್ರೀ ವಿಭೂತಿಯೇ ಬೇಕು.
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ವೇದವನೋದಿದಡೇನು ?
ಆತನೋದಿದ ವೇದಂಗಳು ವ್ಯರ್ಥ ಕಾಣಿರೋ !
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ಯಜ್ಞಂಗಳ ಮಾಡಿದಡೇನು ?

---

೧. ಗಾರ (ಇ) ೨. ಹೇಳು (ಕ)

ಆತ ಮಾಡಿದ ಯಜ್ಞಂಗಳು ವ್ಯರ್ಥ ಕಾಣಿರೋ !
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ದಾನಂಗಳ ಮಾಡಿದಡೇನು ?
ಆತ ಮಾಡಿದ ದಾನಂಗಳು ವ್ಯರ್ಥ ಕಾಣಿರೋ !
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ ತಪವ ಮಾಡಿದಡೇನು ?
ಆತ ಮಾಡಿದ ತಪ ವ್ಯರ್ಥ ಕಾಣಿರೋ !
ಆವನೊಬ್ಬ ಶ್ರೀ ವಿಭೂತಿಯ ಧರಿಸದೆ
ನಿತ್ಯ ನೇಮ ವ್ರತ ಉಪವಾಸಂಗಳ ಮಾಡಿದಡೇನು ?
ಆತ ಮಾಡಿದ ನಿತ್ಯನೇಮವ್ರತಉಪವಾಸಂಗಳು ವ್ಯರ್ಥ ಕಾಣಿರೋ !
ಅದೆಂತೆಂದೊಡೆ : ಬೋಧಾಯನ ಸ್ಮೃತೌ

"ವೃಥಾ ವೇದಾ ವೃಥಾ ಯಜ್ಞಾ ವೃಥಾ ದಾನಂ ವೃಥಾ ತಪಃ ।
ವೃಥಾ ವ್ರತೋಪವಾಸೌ ತು ತ್ರಿಪುಂಡ್ರಂ ಯೋ ನ ಧಾರಯೇತ್ ॥"

ಎಂದುದಾಗಿ
ಸಕಲಕ್ಕೆ ಶ್ರೀ ವಿಭೂತಿಯೇ ಆಧಾರವಯ್ಯ.

ಅಖಂಡೇಶ್ವರಾ ೪

ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಬ್ರಹ್ಮಂಗೆ
ಬ್ರಹ್ಮಪದವಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ವಿಷ್ಣುವಿಂಗೆ
ವಿಷ್ಣುಪದವಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ದೇವತೆಗಳಿಗೆ
ದೇವಪದವಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಋಷಿಗಳಿಗೆ
ಋಷಿಪದವಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಗಂಧರ್ವರುಗಳಿಗೆ
ಗಂಧರ್ವಪದವಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ರುದ್ರಗಣರಿಗೆ
ರುದ್ರಗಣಪದವಾಯಿತ್ತು.

ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಯಕ್ಷರಿಗೆ
ಯಕ್ಷಪದವಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಕಿನ್ನರರಿಗೆ
ಕಿನ್ನರಪದವಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಮರುದ್‌ಗಣರಿಗೆ
ಮರುದ್‌ಗಣಪದವಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಪಿತೃಗಣರಿಗೆ
ಪಿತೃಗಣಪದವಿಯಾಯಿತ್ತು.
ಆದಿಯಲ್ಲಿ ಶ್ರೀ ವಿಭೂತಿಯ ಸ್ನಾನಮಾಡಿದ ಭೂತಗಣರಿಗೆ
ಭೂತಗಣಪದವಿಯಾಯಿತ್ತು.

ಅದೆಂತೆಂದೊಡೆ :

"ಬ್ರಹ್ಮವಿಷ್ಣ್ವಾದಿದೇವಾ ಋಷಯೋ ಗಂಧರ್ವಾ ಯಕ್ಷಕಿನ್ನರಾಃ ।
ಮರುದ್‌ಗಣಾಃ ಪಿತೃಗಣಾಃ ಸರ್ವೇಭೂತಗಣಾ ಅಪಿ ।
ನಿತ್ಯಂ ಚ ಸರ್ವಯತ್ನೇನ ಭಸ್ಮಸ್ನಾನಂ ಪ್ರವರ್ತತೇ ॥"
ಎಂದುದಾಗಿ

ಶ್ರೀ ವಿಭೂತಿಯ ಮಹತ್ತ್ವವ
ಕಂಡು ಕೇಳಿ ನಂಬಲರಿಯದೆ
ಗರ್ವದಿಂದೆ ಮುಂದುಗೆಟ್ಟ ಮರುಳ ಮಾನವರಿಗೆ
ಭವರಾಟಾಳದಲ್ಲಿ ಸತ್ತು ಸತ್ತು ಹುಟ್ಟಿ ಹುಟ್ಟಿ ಬಪ್ಪುದು
ತಪ್ಪದು ನೋಡಾ.
ಅಖಂಡೇಶ್ವರಾ ೫

ಮಹದೈಶ್ವರ್ಯ ಪದವು ಕೈಗೂಡುವಡೆ
ಶ್ರೀ ವಿಭೂತಿಯಿಂದಲ್ಲದೆ ಇಲ್ಲ ನೋಡಾ.
ಪರಮ ಪವಿತ್ರನೆನಿಸಬೇಕಾದಡೆ
ಶ್ರೀ ವಿಭೂತಿಯಿಂದಲ್ಲದೆ ಇಲ್ಲ ನೋಡಾ.
ಸರ್ವೈಶ್ವರ್ಯ ಸರ್ವಸಿದ್ಧಿ ದೊರೆಕೊಂಬುವಡೆ
ಶ್ರೀ ವಿಭೂತಿಯಿಂದಲ್ಲದೆ ಇಲ್ಲ ನೋಡಾ.

ಮಹಾ ಪುಣ್ಯದ ಫಲವು ಪ್ರಾಪ್ತಿಸುವಡೆ
ಶ್ರೀ ವಿಭೂತಿಯಿಂದಲ್ಲದೆ ಇಲ್ಲ ನೋಡಾ.
ದಿನದಿನಕ್ಕೆ ಪಾಪ ಪಲ್ಲಟವಪ್ಪಡೆ
ಶ್ರೀ ವಿಭೂತಿಯಿಂದಲ್ಲದೆ ಇಲ್ಲ ನೋಡಾ.
ಅಂಗಕ್ಕೆ ಶ್ರೀ ವಿಭೂತಿಯೇ ಶೃಂಗಾರ ನೋಡಾ !
ಅದೆಂತೆಂದೊಡೆ :

"ಶ್ರೀಕರಂ ಚ ಪವಿತ್ರಂ ಚ ಹಾರಾದ್ಯಾಭರಣಂ ಯಥಾ ।
ಲೋಕವಶ್ಯಕರಂ ಪುಣ್ಯಂ ಪಾಪನಾಶಂ ದಿನೇ ದಿನೇ ॥"

ಎಂದುದಾಗಿ
ಇಂತಪ್ಪ ಶ್ರೀ ವಿಭೂತಿಯ
ಅಂತರಂಗದಲ್ಲಿ ವಿಶ್ವಾಸ ತುಂಬಿ ಧರಿಸಿದ ಮನುಜರಿಗೆ
ಅನಂತಕೋಟಿ ಪಾತಕಂಗಳು ಪರಿಹಾರವಾಗಿ
ಮುಂದೆ ಶಿವಸಾಯುಜ್ಯಪದವು ದೊರೆಕೊಂಬುದು ನೋಡಾ.
ಅಖಂಡೇಶ್ವರಾ ೬

ಸಂಚಲಗುಣವಳಿದು ಶ್ರೀ ವಿಭೂತಿಯ
ಪಂಚಸ್ಥಾನದಲ್ಲಿ, ಪಂಚ ಬ್ರಹ್ಮಮಂತ್ರದಿಂದೆ ಧರಿಸಲು
ಪಂಚ ಮಹಾ ಪಾತಕಂಗಳು ಪಲ್ಲಟವಪ್ಪುವು ನೋಡಾ.
ಸರ್ವಾಂಗವನು ಧೂಳನವ ಮಾಡಲು
ಸರ್ವ ವ್ಯಾಧಿಗಳು ಪರಿಹರವಪ್ಪುವು ನೋಡಾ.
ಇದು ಕಾರಣ ಇಂಥ ಶ್ರೀ ವಿಭೂತಿಯು
ಲಲಾಟಾದಿ ಮೂವತ್ತೆರಡು ಸ್ಥಾನಗಳಲ್ಲಿ ಧರಿಸಿ
ನಿತ್ಯ ಲಿಂಗಾರ್ಚನೆಯ ಮಾಡುವಾತ ಸತ್ಯ ಶಿವನಲ್ಲದೆ ಬೇರಲ್ಲವಯ್ಯ.
ಅಖಂಡೇಶ್ವರಾ ೭

विभूति की उत्पत्ति



## ವಿಭೂತಿ ಸ್ಥಲ

ಸಚ್ಚಿದಾನಂದ ಪರಶಿವನ ಸದ್ಯೋಜಾತ ಮುಖದಿಂದೆ
ಪೃಥ್ವಿ ತತ್ತ್ವಪುಟ್ಟಿತ್ತು.
ಆ ತತ್ತ್ವದಿಂದೆ ನಿವೃತ್ತಿಯೆಂಬ ಕಲೆ ಪುಟ್ಟಿತ್ತು.
ಆ ಕಲೆಯಿಂದೆ ಕಪಿಲ ವರ್ಣದ ನಂದಿನಿಯೆಂಬ ಗೋವು ಪುಟ್ಟಿತ್ತು.
ಆ ಗೋವಿನ ಗೋಮಯದಿಂದೆ ಮಹದೈಶ್ವರ್ಯವನ್ನುಂಟುಮಾಡುವಂಥ
ಭೂತಿಯೆಂಬ ವಿಭೂತಿ ಪುಟ್ಟಿತ್ತು.

ಮತ್ತಂ :

ಸಚ್ಚಿದಾನಂದ ಪರಶಿವನ ವಾಮದೇವ ಮುಖದಿಂದೆ
ಅಪ್ಪು ತತ್ತ್ವ ಪುಟ್ಟಿತ್ತು.
ಆ ತತ್ತ್ವದಿಂದೆ ಪ್ರತಿಷ್ಠೆಯೆಂಬ ಕಲೆ ಪುಟ್ಟಿತ್ತು.
ಆ ಕಲೆಯಿಂದೆ ಕೃಷ್ಣವರ್ಣದ ಭದ್ರೆಯೆಂಬ ಗೋವು ಪುಟ್ಟಿತ್ತು.
ಆ ಗೋವಿನ ಗೋಮಯದಿಂದೆ ದಿವ್ಯ ಪ್ರಕಾಶದಿಂ ಬೆಳಗುವಂಥ
ಭಸಿತವೆಂಬ ವಿಭೂತಿ ಪುಟ್ಟಿತ್ತು.

ಮತ್ತಂ :

ಸಚ್ಚಿದಾನಂದ ಪರಶಿವನ ಅಘೋರ ಮುಖದಿಂದೆ
ಅಗ್ನಿತತ್ತ್ವ ಪುಟ್ಟಿತ್ತು.
ಆ ತತ್ತ್ವದಿಂದೆ ವಿದ್ಯೆಯೆಂಬ ಕಲೆ ಪುಟ್ಟಿತ್ತು
ಆ ಕಲೆಯಿಂದೆ ರಕ್ತವರ್ಣದ ಸುರಭಿಯೆಂಬ ಗೋವು ಪುಟ್ಟಿತ್ತು.
ಆ ಗೋವಿನ ಗೋಮಯದಿಂದೆ ಸಮಸ್ತ ಪಾತಕಂಗಳ ಭಕ್ಷಿಸುವಂಥ
ಭಸ್ಮವೆಂಬ ವಿಭೂತಿ ಪುಟ್ಟಿತ್ತು.

ಮತ್ತಂ :

ಸಚ್ಚಿದಾನಂದ ಪರಶಿವನ ತತ್ಪುರುಷ ಮುಖದಿಂದೆ
ವಾಯುತತ್ತ್ವ ಪುಟ್ಟಿತ್ತು.

ಆ ತತ್ತ್ವದಿಂದೆ ಶಾಂತಿಯೆಂಬ ಕಲೆ ಪುಟ್ಟಿತ್ತು.
ಆ ಕಲೆಯಿಂದೆ ಶ್ವೇತವರ್ಣದ ಸುಶೀಲೆಯೆಂಬ ಗೋವು ಪುಟ್ಟಿತ್ತು.
ಆ ಗೋವಿನ ಗೋಮಯದಿಂದೆ ಸಕಲ ವ್ಯಾಧಿಗಳ ಕೆಡಿಸುವಂಥ
ಕ್ಷಾರವೆಂಬ ವಿಭೂತಿ ಪುಟ್ಟಿತ್ತು.

ಮತ್ತಂ :

ಸಚ್ಚಿದಾನಂದ ಪರಶಿವನ ಈಶಾನ್ಯ ಮುಖದಿಂದೆ
ಆಕಾಶತತ್ತ್ವ ಪುಟ್ಟಿತ್ತು.
ಆ ತತ್ತ್ವದಿಂದೆ ಶಾಂತ್ಯತೀತವೆಂಬ ಕಲೆ ಪುಟ್ಟಿತ್ತು.
ಆ ಕಲೆಯಿಂದೆ ಚಿತ್ರವರ್ಣದ ಸುಮನೆಯೆಂಬ ಗೋವು ಪುಟ್ಟಿತ್ತು.
ಆ ಗೋವಿನ ಗೋಮಯದಿಂದೆ ಭೂತ-ಪ್ರೇತ-ಪಿಶಾಚಿ
ಬ್ರಹ್ಮರಾಕ್ಷಸ ಚೋರ ಸರ್ಪ ವ್ಯಾಘ್ರಾದಿಗಳ ಭಯವ ಕೆಡಿಸುವ
ರಕ್ಷೆಯೆಂಬ ವಿಭೂತಿ ಪುಟ್ಟಿತ್ತು.

ಅದೆಂತೆಂದೊಡೆ : ಜಾಬಾಲೋಪನಿಷದಿ

"ಸದ್ಯೋಜಾತಾತ್ ಪೃಥ್ವೀ ತಸ್ಯಾ ನಿವೃತ್ತಿಸ್ತಸ್ಯಾಃ ಕಪಿಲವರ್ಣಾ ನಂದಾ
ತದ್‌ಗೋಮಯೇನ ವಿಭೂತಿರ್ಜಾತಃ ।
ವಾಮದೇವಾದುದಕಂ ತಸ್ಮಾತ್ ಪ್ರತಿಷ್ಠಾ ತಸ್ಯಾಃ ಕೃಷ್ಣವರ್ಣಾ ಭದ್ರಾ
ತದ್‌ಗೋಮಯೇನ ಭಸಿತಂ ಜಾತಃ ।
ಅಘೋರಾತ್ ವಹ್ನಿಃ ತಸ್ಮಾತ್ ವಿದ್ಯಾ ತಸ್ಯಾ ರಕ್ತವರ್ಣಾ ಸುರಭಿಃ
ತದ್ ಗೋಮಯೇನ ಭಸ್ಮ ಜಾತಃ ।
ತತ್ಪುರುಷಾತ್ ವಾಯುಃ ತಸ್ಮಾತ್ ಶಾಂತಿಃ ತಸ್ಯಾಃ ಶ್ವೇತವರ್ಣಾ ಸುಶೀಲಾ
ತಸ್ಯಾಃ ಗೋಮಯೇನ ಕ್ಷಾರಂ ಜಾತಃ ।
ಈಶಾನಾದಾಕಾಶಃ ತಸ್ಮಾತ್ ಶಾಂತ್ಯತೀತಾ ತಸ್ಯಾಶ್ಚಿತ್ರವರ್ಣಾ ಸುಮನಾ
ಸ್ತದ್‌ಗೋಮಯೇನ ರಕ್ಷಾ ಜಾತಃ ।"

"ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಭಸ್ಮನಃ
ಭವಂತಿ ಪಂಚ ನಾಮಾನಿ ಪಂಚಭಿರ್ನಾಮಭಿರ್‌ಭೃಶಮ್
ಐಶ್ವರ್ಯ ಕಾರಣಾದ್ಭೂತಿರ್ಭಾಸನಾದ್ಭಸಿತಂ

ಸರ್ವಾಘಭಕ್ಷಣಾದ್ಭಸ್ಮ ಆಪದಾಂ ಕ್ಷಾರಣಾತ್ ಕ್ಷಾರಂ
ಭೂತ-ಪ್ರೇತ-ಪಿಶಾಚ ಬ್ರಹ್ಮರಾಕ್ಷಸಾಪಸ್ಮಾರ
ಭವಭೀತಿಭ್ಯೋಽಭಿರಕ್ಷಣಾತ್ ರಕ್ಷೇತಿ" (?)

ಎಂದುದಾಗಿ

ಇಂತಪ್ಪ ಶ್ರೀ ವಿಭೂತಿಯ ನಿರಂತರ ಸಾವಧಾನಭಕ್ತಿಯಿಂದೆ
ನಾನು ಸರ್ವಾಂಗದಲ್ಲಿ ಧರಿಸಿ ಶುದ್ಧ ನಿರ್ಮಲ
ಪರಮಪವಿತ್ರ ಕಾಯನಾದೆನಯ್ಯ !
ಅಖಂಡೇಶ್ವರಾ ೮

ಶ್ರೀ ವಿಭೂತಿಯ ಘನಮಹಿಮೆಯ ಹೇಳುವಡೆ
ಬ್ರಹ್ಮಂಗಸದಳ, ವಿಷ್ಣುವಿಂಗಸಾಧ್ಯ; ರುದ್ರಂಗಗೋಚರ ನೋಡಾ.
ಅದೆಂತೆಂದೊಡೆ : ಮತ್ಸ್ಯಪುರಾಣ

"ಬ್ರಹ್ಮಣಾ ವಿಷ್ಣುನಾ ಚಾಪಿ ರುದ್ರೇಣ ಚ ಮುನೀಶ್ವರಾಃ ।
ಭಸ್ಮಧಾರಣಮಾಹಾತ್ಮ್ಯಂ ನ ಶಕ್ಯಂ ಪರಿಭಾಷಿತುಮ್ ॥"

ಎಂದುದಾಗಿ

ಇಂತಪ್ಪ ಶ್ರೀ ವಿಭೂತಿಯೆಂಬ
ಪರತರ ಪರಂಜ್ಯೋತಿಸ್ವರೂಪು ನೀವಾದಿರಾಗಿ
ಅಖಂಡೇಶ್ವರಾ, ಎನಗೆ ಶ್ರೀ ವಿಭೂತಿಯೇ ಸರ್ವಸಿದ್ಧಿಯಯ್ಯಾ ! ೯

ಆ ತತ್ತ್ವದಿಂದೆ ಶಾಂತಿಯೆಂಬ ಕಲೆ ಪುಟ್ಟಿತ್ತು.
ಆ ಕಲೆಯಿಂದೆ ಶ್ವೇತವರ್ಣದ ಸುಶೀಲೆಯೆಂಬ ಗೋವು ಪುಟ್ಟಿತ್ತು.
ಆ ಗೋವಿನ ಗೋಮಯದಿಂದೆ ಸಕಲ ವ್ಯಾಧಿಗಳ ಕೆಡಿಸುವಂಥ
ಕ್ಷಾರವೆಂಬ ವಿಭೂತಿ ಪುಟ್ಟಿತ್ತು.

ಮತ್ತಂ :

ಸಚ್ಚಿದಾನಂದ ಪರಶಿವನ ಈಶಾನ್ಯ ಮುಖದಿಂದೆ
ಆಕಾಶತತ್ತ್ವ ಪುಟ್ಟಿತ್ತು.
ಆ ತತ್ತ್ವದಿಂದೆ ಶಾಂತ್ಯತೀತವೆಂಬ ಕಲೆ ಪುಟ್ಟಿತ್ತು.
ಆ ಕಲೆಯಿಂದೆ ಚಿತ್ರವರ್ಣದ ಸುಮನೆಯೆಂಬ ಗೋವು ಪುಟ್ಟಿತ್ತು.
ಆ ಗೋವಿನ ಗೋಮಯದಿಂದೆ ಭೂತ-ಪ್ರೇತ-ಪಿಶಾಚಿ
ಬ್ರಹ್ಮರಾಕ್ಷಸ ಚೋರ ಸರ್ಪ ವ್ಯಾಘ್ರಾದಿಗಳ ಭಯವ ಕೆಡಿಸುವ
ರಕ್ಷೆಯೆಂಬ ವಿಭೂತಿ ಪುಟ್ಟಿತ್ತು.

ಅದೆಂತೆಂದೊಡೆ : ಜಾಬಾಲೋಪನಿಷದಿ

"ಸದ್ಯೋಜಾತಾತ್ ಪೃಥ್ವೀ ತಸ್ಯಾ ನಿವೃತ್ತಿಸ್ತಸ್ಯಾಃ ಕಪಿಲವರ್ಣಾ ನಂದಾ
ತದ್‌ಗೋಮಯೇನ ವಿಭೂತಿರ್ಜಾತಃ ।
ವಾಮದೇವಾದುದಕಂ ತಸ್ಮಾತ್ ಪ್ರತಿಷ್ಠಾ ತಸ್ಯಾಃ ಕೃಷ್ಣವರ್ಣಾ ಭದ್ರಾ
ತದ್‌ಗೋಮಯೇನ ಭಸಿತಂ ಜಾತಃ ।
ಅಘೋರಾತ್ ವಹ್ನಿಃ ತಸ್ಮಾತ್ ವಿದ್ಯಾ ತಸ್ಯಾ ರಕ್ತವರ್ಣಾ ಸುರಭಿಃ
ತದ್ ಗೋಮಯೇನ ಭಸ್ಮ ಜಾತಃ ।
ತತ್ಪುರುಷಾತ್ ವಾಯುಃ ತಸ್ಮಾತ್ ಶಾಂತಿಃ ತಸ್ಯಾಃ ಶ್ವೇತವರ್ಣಾ ಸುಶೀಲಾ
ತಸ್ಯಾಃ ಗೋಮಯೇನ ಕ್ಷಾರಂ ಜಾತಃ ।
ಈಶಾನಾದಾಕಾಶಃ ತಸ್ಮಾತ್ ಶಾಂತ್ಯತೀತಾ ತಸ್ಯಾಶ್ಚಿತ್ರವರ್ಣಾ ಸುಮನಾ
ಸ್ತದ್‌ಗೋಮಯೇನ ರಕ್ಷಾ ಜಾತಃ ।"

"ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಭಸ್ಮನಃ
ಭವಂತಿ ಪಂಚ ನಾಮಾನಿ ಪಂಚಭಿರ್ನಾಮಭಿರ್‌ಭೃಶಮ್
ಐಶ್ವರ್ಯ ಕಾರಣಾದ್ಭೂತಿರ್ಭಾಸನಾದ್ಭಸಿತಂ

ಸರ್ಪಾಘಭಕ್ಷಣಾದ್ಭಸ್ಮ ಆಪದಾಂ ಕ್ಷಾರಣಾತ್ ಕ್ಷಾರಂ
ಭೂತ-ಪ್ರೇತ-ಪಿಶಾಚ ಬ್ರಹ್ಮರಾಕ್ಷಸಾಪಸ್ಮಾರ
ಭವಭೀತಿಭ್ಯೋಽಭಿರಕ್ಷಣಾತ್ ರಕ್ಷೇತಿ" (?)

ಎಂದುದಾಗಿ

ಇಂತಪ್ಪ ಶ್ರೀ ವಿಭೂತಿಯ ನಿರಂತರ ಸಾವಧಾನಭಕ್ತಿಯಿಂದೆ
ನಾನು ಸರ್ವಾಂಗದಲ್ಲಿ ಧರಿಸಿ ಶುದ್ಧ ನಿರ್ಮಲ
ಪರಮಪವಿತ್ರ ಕಾಯನಾದೆನಯ್ಯ !
ಅಖಂಡೇಶ್ವರಾ ೮

ಶ್ರೀ ವಿಭೂತಿಯ ಘನಮಹಿಮೆಯ ಹೇಳುವಡೆ
ಬ್ರಹ್ಮಂಗಸದಳ, ವಿಷ್ಣುವಿಂಗಸಾಧ್ಯ; ರುದ್ರಂಗಗೋಚರ ನೋಡಾ.
ಅದೆಂತೆಂದೊಡೆ : ಮತ್ಸ್ಯಪುರಾಣ

"ಬ್ರಹ್ಮಣಾ ವಿಷ್ಣುನಾ ಚಾಪಿ ರುದ್ರೇಣ ಚ ಮುನೀಶ್ವರಾಃ ।
ಭಸ್ಮಧಾರಣಮಾಹಾತ್ಮ್ಯಂ ನ ಶಕ್ಯಂ ಪರಿಭಾಷಿತುಮ್ ॥"

ಎಂದುದಾಗಿ

ಇಂತಪ್ಪ ಶ್ರೀ ವಿಭೂತಿಯೆಂಬ
ಪರತರ ಪರಂಜ್ಯೋತಿಸ್ವರೂಪು ನೀವಾದಿರಾಗಿ
ಅಖಂಡೇಶ್ವರಾ, ಎನಗೆ ಶ್ರೀ ವಿಭೂತಿಯೇ ಸರ್ವಸಿದ್ಧಿಯಯ್ಯಾ ! ೯

# ರುದ್ರಾಕ್ಷಿ ಸ್ಥಲ

ಗುರುಕಾರುಣ್ಯವ ಪಡೆದು
ಅಂಗದ ಮೇಲೆ ಲಿಂಗಧಾರಣವಾಗಿ
ಶ್ರೀ ವಿಭೂತಿಯ ಧರಿಸಿದ ಮಹಾತ್ಮನು
ಮುಂದೆ ಶಿವಜ್ಞಾನಚಕ್ಷುವಿನಿಂದುದಯಿಸಿದ
ರುದ್ರಾಕ್ಷಿಯ ಧರಿಸುವ ಭೇದವೆಂತೆಂದೊಡೆ:
ಶಿಖಾಸ್ಥಾನದಲ್ಲಿ ಏಕಮುಖವನುಳ್ಳಂಥ ಒಂದು ರುದ್ರಾಕ್ಷಿಯ
"ಓಂ ಸದಾಶಿವಾಯ ನಮಃ"
ಎಂಬ ಮಂತ್ರದಿಂದ ಧಾರಣಮಾಡುವುದು.
ಮಸ್ತಕದಲ್ಲಿ ಎರಡು ಮುಖ ಮೂರು ಮುಖ ಹನ್ನೆರಡು
ಮುಖಂಗಳನುಳ್ಳಂಥ ಮೂರು ರುದ್ರಾಕ್ಷಿಗಳ
"ಓಂ ವಹ್ನಿ ಸೂರ್ಯಸೋಮಾಧಿಪಾಯ ಶಿವಾಯ ನಮಃ"
ಎಂಬ ಮಂತ್ರದಿಂದೆ ಧಾರಣಮಾಡುವುದು.
ಶಿರವ ಬಳಸಿ ಹನ್ನೊಂದು ಮುಖಂಗಳನುಳ್ಳಂಥ
ಮೂವತ್ತಾರು ರುದ್ರಾಕ್ಷಿಗಳ
"ಓಂ ಷಟ್‌ತ್ರಿಂಶ ತತ್ತ್ವಾತ್ಮಕಾಯ ಪರಶಿವಾಯನಮಃ"
ಎಂಬ ಮಂತ್ರದಿಂದೆ ಧಾರಣಮಾಡುವುದು.
ಕರ್ಣಯುಗದಲ್ಲಿ ಐದು ಮುಖ ಹತ್ತು ಮುಖ
ಏಳು ಮುಖಂಗಳನುಳ್ಳಂಥ ಒಂದೊಂದು ರುದ್ರಾಕ್ಷಿಯ
"ಓಂ ಸೋಮಾಯ ನಮಃ"
ಎಂಬ ಮಂತ್ರದಿಂದ ಧಾರಣಮಾಡುವುದು.

ಕಂಠಸ್ಥಾನದಲ್ಲಿ ಎಂಟು ಮುಖ, ಆರು ಮುಖಂಗಳನುಳ್ಳಂಥ
ಮೂವತ್ತೆರಡು ರುದ್ರಾಕ್ಷಿಗಳ
"ಓಂ ತ್ರಿಯಂಬಕಕಲಾತ್ಮನೇ ಶ್ರೀ ಕಂಠಾಯ ನಮಃ"
ಎಂಬ ಮಂತ್ರದಿಂದ ಧಾರಣಮಾಡುವುದು.
ಉರಸ್ಥಾನದಲ್ಲಿ ನಾಲ್ಕು ಮುಖಂಗಳನುಳ್ಳಂಥ
ಐವತ್ತುನಾಲ್ಕು ರುದ್ರಾಕ್ಷಿಗಳ
"ಓಂ ಕಂಠಾದಿಮುಕ್ತ್ಯಾತ್ಮಕಾಯ ಶ್ರೀ ಸರ್ವಜ್ಞಾಯ ನಮಃ"
ಎಂಬ ಮಂತ್ರದಿಂದೆ ಧಾರಣಮಾಡುವುದು.
ಬಾಹುದ್ವಯದಲ್ಲಿ ಹದಿಮೂರು ಮುಖಂಗಳನುಳ್ಳಂಥ
ಹದಿನಾರು ಹದಿನಾರು ರುದ್ರಾಕ್ಷಿಗಳ
"ಓಂ ಸುಖಾಸನಾದಿ ಷೋಡಶಮೂರ್ತ್ಯಾತ್ಮಕಾಯ ಶ್ರೀಕಂಠಾಯ ನಮಃ"
ಎಂಬ ಮಂತ್ರದಿಂದೆ ಬಲದ ತೋಳಿನಲ್ಲಿ ಧಾರಣಮಾಡುವುದು.
"ಓಂ ಸೋಮಕಲಾತ್ಮಕಾಯ ಸೋಮಾಯ ನಮಃ"
ಎಂಬ ಮಂತ್ರದಿಂದೆ ಎಡದ ತೋಳಿನಲ್ಲಿ ಧಾರಣಮಾಡುವುದು.
ಮುಂಗೈ ಎರಡರಲ್ಲಿ ಒಂಭತ್ತು ಮುಖಂಗಳನುಳ್ಳಂಥ
ಹನ್ನೆರಡು ಹನ್ನೆರಡು ರುದ್ರಾಕ್ಷಿಗಳ
"ಓಂ ದ್ವಾದಶಾದಿತ್ಯಾಕ್ಷಾಯ ಶ್ರೀ ಮಹಾದೇವಾಯ ನಮಃ"
ಎಂಬ ಮಂತ್ರದಿಂದೆ ಬಲದ ಮುಂಗೈಯಲ್ಲಿ ಧಾರಣಮಾಡುವುದು.
"ಓಂ ಕೇಶವಾದಿತ್ಯಾಯ ಉಮಾಪತಯೇ ನಮಃ"
ಎಂಬ ಮಂತ್ರದಿಂದೆ ಎಡದ ಮುಂಗೈಯಲ್ಲಿ ಧಾರಣಮಾಡುವುದು.
ಕಕ್ಷಸ್ಥಾನದಲ್ಲಿ ಯಜ್ಞೋಪವೀತರೂಪವಾಗಿ
ಹದಿನಾಲ್ಕು ಮುಖಂಗಳುಳ್ಳಂಥ ನೂರೆಂಟು ರುದ್ರಾಕ್ಷಿಗಳ
"ಓಂ ಶತರುದ್ರವಿದ್ಯಾಸ್ವರೂಪಾತ್ಮಕಾಯ ಶ್ರೀ ವಿಶ್ವೇಶ್ವರಾಯ ನಮಃ"
ಎಂಬ ಮಂತ್ರದಿಂದೆ ಧಾರಣಮಾಡುವುದು.
ಇಂತೀ ಸ್ಥಾನಗಣನೆ ಮುಖ ಮಂತ್ರಂಗಳ ಭೇದವನರಿದು
ಶ್ರೀ ರುದ್ರಾಕ್ಷಿ ಧರಿಸಿದ ಶರಣ ತಾನೇ
ಸಾಕ್ಷಾತ್ ಪರಶಿವನಲ್ಲದೆ ಬೇರಲ್ಲವಯ್ಯ !

ಅದೆಂತೆಂದೊಡೆ : ಪರಮರಹಸ್ಯ

* "ಪಾತಿ ತ್ರೈಪುಂಡ್ರಕಂ ಯಸ್ಯ । ಗತಿ ರುದ್ರಾಕ್ಷ ಮಾಲಿಕಂ
ವಕ್ತ್ರೇ ಷಡಕ್ಷರಂ ಮಂತ್ರ । ಸ ಶಿವಃ ನಾ ಸಂಶಯಃ"

ಎಂದುದಾಗಿ

ಅಂತಪ್ಪ ಮಹಿಮಂಗೆ ಶರಣೆಂದವರೆ ಧನ್ಯರಯ್ಯಾ!

ಅಖಂಡೇಶ್ವರಾ ೧

ಅನಂತಕೋಟಿ ಯಜ್ಞಂಗಳ ಮಾಡಿ ತೊಳಲಿ ¹ಬಳಲಲದೇಕೋ¹ ?
ಆ ಯಜ್ಞಂಗಳ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ
ದೊರೆಕೊಂಬುದು ನೋಡಾ.
ಅನಂತಕಾಲ ತಪವ ಮಾಡಿ ತೊಳಲಿ ¹ಬಳಲಲದೇಕೋ¹ ?
ಆ ತಪಸ್ಸಿನ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ
ದೊರೆಕೊಂಬುದು ನೋಡಾ.
ಅನಂತಕಾಲ ದಾನವ ಮಾಡಿ ತೊಳಲಿ ¹ಬಳಲಲದೇಕೋ¹ ?
ಆ ದಾನದ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ
ದೊರೆಕೊಂಬುದು ನೋಡಾ.
ಅನಂತಕಾಲ ವೇದಾಭ್ಯಾಸವ ಮಾಡಿ ತೊಳಲಿ ¹ಬಳಲಲದೇಕೋ¹
ಆ ವೇದಾಭ್ಯಾಸದ ಫಲವು ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೇ
ದೊರೆಕೊಂಬುದು ನೋಡಾ.
ಅದೆಂತೆಂದೊಡೆ : ಪದ್ಮಪುರಾಣ

"ಸರ್ವಯಜ್ಞ ತಪೋದಾನವೇದಾಭ್ಯಾಸೈಶ್ಚ ಯತ್ಫಲಮ್
ತತ್ಫಲಂ ಲಭತೇ ಸದ್ಯೋ ರುದ್ರಾಕ್ಷಸ್ಯ ತು ಧಾರಣಾತ್ ॥"

ಎಂದುದಾಗಿ

---

* (ಅ) ಪ್ರತಿಯಲ್ಲಿ ಮಾತ್ರ ಅದೆ. ೧. ಬಳುಲುವದ್ಯಾಕೋ (ಬ), ಬಳಲಿದ್ಯಾಕೋ(ಕ), ಬಳಲುವದೇತಕೋ (ಡ, ಇ)

ಇಂತಪ್ಪ ರುದ್ರಾಕ್ಷಿಯ ಧರಿಸಿದ ಮಹಾತ್ಮನು
ವಿಶ್ವಾಧಿಕನು ವಿಶ್ವಾತೀತನು ತಾನೇ ನೋಡಾ !
ಅಖಂಡೇಶ್ವರಾ ೨

ಮುನ್ನ ಮಹಾನಂದಿಯೆಂಬ ವೇಶ್ಯಾಂಗನೆಯ ದೆಸೆಯಿಂದೆ
ಕುಕ್ಕುಟ ವಾನರ ರುದ್ರಾಕ್ಷಿಯ ಧರಿಸಿ
ರಾಜಪದವಿಯ ಪಡೆದುವು ನೋಡಾ !
ಮುನ್ನ ಬೇಂಟೆಗಾರನ ದೆಸೆಯಿಂದೆ
ಶುನಿಯು ರುದ್ರಾಕ್ಷಿಯ ಧರಿಸಿ
ರುದ್ರಪದವಿಯಲ್ಲಿ ನಿಂದಿತ್ತು ನೋಡಾ
ಮುನ್ನ ೧ಹರದನ೧ ದೆಸೆಯಿಂದೆ
ಕತ್ತೆ ರುದ್ರಾಕ್ಷಿಯ ಪೊತ್ತು
ಕರ್ತೃಶಿವನ ಸಾಯುಜ್ಯಪದವ ಸಾರಿತ್ತು ನೋಡಾ !
ಮುನ್ನ ಚಾರಮರಾಯನು ರುದ್ರಾಕ್ಷಿಯ ಧರಿಸಿ
ಹರನ ಕೈಲಾಸಕ್ಕೆ ದಾಳಿವರಿದನು ನೋಡಾ !
ಅಖಂಡೇಶ್ವರಾ ೩

ಸ್ವಜಾತಿ ೨ಧರ್ಮ ನೀತಿಯ೨ ಬಿಟ್ಟು ವಿಜಾತಿಗಳ ಎಂಜಲು ತಿಂಬ
ಪಾಪಕರ್ಮಿಗಳಾದಡಾಗಲಿ
ಸರ್ವಪಾಪವ ಬಿಟ್ಟಾತನಾದಡಾಗಲಿ
ರುದ್ರಾಕ್ಷಿಮಾಲೆಯ ಕೊರಳಲ್ಲಿ ಧರಿಸಿದರೆ
ಪರಮಪವಿತ್ರನೆನಿಸಿ ಹರನ ಕೈಲಾಸದಲ್ಲಿಪ್ಪನು ನೋಡಾ !

---

೧. ವ್ಯವಹಾರಿಕನ (ಬ, ಇ), ಬೆವಹಾರನ (ಕ)
೨. ನೀತಿಧರ್ಮವ (ಇ)

ಅದೆಂತೆಂದೊಡೆ : ಸ್ಕಂದಪುರಾಣೇ

"ರುದ್ರಾಕ್ಷಮಾಲಿಕಾಂ ಕಂಠೇ ಧಾರಯೇತ್ ಭಕ್ತಿವರ್ಧಿತಃ ।
ಪಾಪಕರ್ಮಾಪಿ ಯೋ ಮರ್ತ್ಯೋ ರುದ್ರಲೋಕೇ ಮಹೀಯತೇ ॥
ಸೋಚ್ಛಿಷ್ಟೋ ವಾಪಿಕರ್ಮಸ್ಥೋ ಯುಕ್ತೋ ವಾ ಸರ್ವಪಾತಕೈಃ ।
ಮುಚ್ಯತೇ ಸರ್ವಪಾಪೇಭ್ಯೋ ನರೋ ರುದ್ರಾಕ್ಷಧಾರಣಾತ್ ॥"

ಎಂದುದಾಗಿ

ಇಂತಪ್ಪ ರುದ್ರಾಕ್ಷಿಯು ನೀನೇ ಅಯ್ಯ

ಅಖಂಡೇಶ್ವರಾ ೪

ಆವನೊಬ್ಬ ಉಪಪಾತಕ ಮಹಾಪಾತಕಂಗಳ ಮಾಡಿ
ಶ್ರೀ ರುದ್ರಾಕ್ಷಿಯ ನಾಮೋಚ್ಚರಣೆಯ ಮಾಡಿದಡೆ
ಆ ಪಾತಕಂಗಳು ಪರಿಹಾರವಾಗಿ
ಹತ್ತು ಸಾವಿರ ಗೋದಾನದ ಫಲವು ಕೈಸಾರುತಿಪ್ಪುದು ನೋಡಾ !
ಆ ರುದ್ರಾಕ್ಷಿಯ ಸ್ವರೂಪವನು ಕಂಗಳ ತುಂಬಿ ನೋಡಿದಡೆ
ಶತಕೋಟಿ ಪುಣ್ಯದ ಫಲವು ಕೈಸಾರುತಿಪ್ಪುದು ನೋಡಾ !
ಆ ರುದ್ರಾಕ್ಷಿಯ ಮುಟ್ಟಿ ಮುಟ್ಟಿ ಪೂಜಿಸಿದಡೆ
ಸಹಸ್ರಕೋಟಿ ಪುಣ್ಯದ ಫಲವು ಕೈಸಾರುತಿಪ್ಪುದು ನೋಡಾ !
ಆ ರುದ್ರಾಕ್ಷಿಯ ತತ್ತತ್ ಸ್ಥಾನಂಗಳಲ್ಲಿ ಭಕ್ತಿಯಿಂದೆ ಧರಿಸಿದಡೆ
ಲಕ್ಷಕೋಟಿ ಪುಣ್ಯದ ಫಲವು ಕೈಸಾರುತಿಪ್ಪುದು ನೋಡಾ !
ಆ ರುದ್ರಾಕ್ಷಿಯ ಮಣಿಗಳಿಂದೆ ಜಪವ ಮಾಡಿದಡೆ
ಅನಂತಕೋಟಿ ಪುಣ್ಯದ ಫಲವು ಕೈಸಾರುತಿಪ್ಪುದು ನೋಡಾ !
ಅದೆಂತೆಂದೊಡೆ :

"ಸಪ್ತಕೋಟಿಶತಂ ಪುಣ್ಯಂ ಲಭತೇ ಧಾರಣಾತ್ ನರಃ ।
ಲಕ್ಷಕೋಟಿಸಹಸ್ರಾಣಿ ಲಕ್ಷಕೋಟಿ ಶತಾನಿ ಚ ।
ತತ್ ಜಪಾತ್ ಲಭತೇ ಪುಣ್ಯಂ ನಾತ್ರ ಕಾರ್ಯಾ ವಿಚಾರಣಾ ॥"

ಎಂದುದಾಗಿ

ಇಂತಪ್ಪ ರುದ್ರಾಕ್ಷಿಯ ಧರಿಸಿದ ಫಲಕ್ಕೆ
ಇನ್ನಾವ ಫಲವು ಸರಿಯಿಲ್ಲವೆಂದು
ಸಕಲಾಗಮಂಗಳು [೧]ಸಾರು[೧]ತಿಪ್ಪುವು ನೋಡಾ !
ಅಖಂಡೇಶ್ವರಾ ೫

ರುದ್ರಾಕ್ಷಿಯೆಂದೊಡೆ ಸಾಕ್ಷಾತ್ ಪರಶಿವನು ತಾನೆ ನೋಡಾ !
ಅಗ್ರಜನಾಗಲಿ ಅಂತ್ಯಜನಾಗಲಿ
ಮೂರ್ಖನಾಗಲಿ ಪಂಡಿತನಾಗಲಿ
ಸುಗುಣಿಯಾಗಲಿ ದುರ್ಗುಣಿಯಾಗಲಿ
ಆವನಾದಡೇನು ? ರುದ್ರಾಕ್ಷಿಯ ಧರಿಸಿದಾಕ್ಷಣದಲ್ಲಿಯೆ
ಆತ ಇಹಲೋಕದಲ್ಲಿಯೆ[೧] ರುದ್ರನೆನಿಸುವನು.
ಪರಲೋಕದಲ್ಲಿಯೂ ರುದ್ರನೆನಿಸುವನು.
ಅದೆಂತೆಂದೊಡೆ : ಶಿವಧರ್ಮೇ

"ರುದ್ರಾಕ್ಷಾಣಿ ಸ್ವಯಂ ರುದ್ರೋ ಭವೇತ್ ರುದ್ರಾಕ್ಷಧಾರಕಃ ।
ರುದ್ರಾಕ್ಷಂ ಧಾರಯೇತ್ ತಸ್ಮಾದಿಹ ರುದ್ರಃ ಪರತ್ರ ಚ ॥
ಬ್ರಾಹ್ಮಣೋ ವಾಪಿ ಚಾಂಡಾಲೋ ದುರ್ಗುಣಃ ಸುಗುಣೋಽಪಿ ವಾ ।
ತಸ್ಮಾತ್ ರುದ್ರಾಕ್ಷಕಂಠೇನ ದೇಹಾಂತೇ ತು ಶಿವಂ ವ್ರಜೇತ್ ॥"

ಎಂದುದಾಗಿ
ಇದು ಕಾರಣ ರುದ್ರಾಕ್ಷಿಯ ಮಹಿಮೆಯನು ಹೇಳುವಡೆ
ವೇದಶಾಸ್ತ್ರಪುರಾಣಗಳಿಗೆ ಅಗೋಚರವಾಗಿಪ್ಪುದಯ್ಯ !
ಅಖಂಡೇಶ್ವರಾ ೬

ಅಯ್ಯಾ ಎನಗೆ ರುದ್ರಾಕ್ಷಿಯೇ ಪುಣ್ಯದ ಪುಂಜ ನೋಡಾ !
ಅಯ್ಯಾ ಎನಗೆ ರುದ್ರಾಕ್ಷಿಯೇ ಭಾಗ್ಯದ ನಿಧಿಯು ನೋಡಾ !
ಅಯ್ಯಾ ಎನಗೆ ರುದ್ರಾಕ್ಷಿಯೇ ಸತ್ಯದ ಸದನ ನೋಡಾ !

---

೧. ಯೂ

ಅಯ್ಯಾ ಎನಗೆ ರುದ್ರಾಕ್ಷಿಯೇ ನಿತ್ಯದ ನಿಲವು ನೋಡಾ !
ಅಯ್ಯಾ ಎನಗೆ ರುದ್ರಾಕ್ಷಿಯೇ ಭಕ್ತಿಯ ಬೆಳಗು ನೋಡಾ !
ಅಯ್ಯಾ ಎನಗೆ ರುದ್ರಾಕ್ಷಿಯೇ ಮುಕ್ತಿಯ ಸೋಪಾನ ನೋಡಾ !
ಅಯ್ಯಾ ಎನಗೆ ರುದ್ರಾಕ್ಷಿಯೇ ಶಕ್ತಿಯ ಬಲವು ನೋಡಾ !
ಇಂತಪ್ಪ ರುದ್ರಾಕ್ಷಿಯ
ಎನ್ನಂತರಂಗ ಶುದ್ಧವಾಗಿ ಅವಿರಳ ಭಕ್ತಿಯಿಂದ ಧರಿಸಿ
ನಿಶ್ಚಿಂತ ನಿರ್ಭ್ರಾಂತನಾಗಿರ್ದೆನಯ್ಯ !

ಅಖಂಡೇಶ್ವರಾ ೭

# ಪಂಚಾಕ್ಷರಿ ಸ್ಥಲ

ಪಂಚಾಕ್ಷರಿಯೆಂದಡೆ ಪರತತ್ತ್ವವು ತಾನೆ ನೋಡಾ.
ಪಂಚಾಕ್ಷರಿಯೆಂದಡೆ ಪರವಸ್ತುವು ತಾನೆ ನೋಡಾ.
ಪಂಚಾಕ್ಷರಿಯೆಂದಡೆ ಪರಬ್ರಹ್ಮವು ತಾನೆ ನೋಡಾ.
ಪಂಚಾಕ್ಷರಿಯೆಂದಡೆ ಪರಮೇಶ್ವರನ ನಿಜನಾಮವು ತಾನೆ ನೋಡಾ.
ಪಂಚಾಕ್ಷರಿಯೆಂದಡೆ ಸಾಕ್ಷಾತ್ ಪರಶಿವನು ತಾನೆ ನೋಡಾ.
ಇಂತಪ್ಪ ಪಂಚಾಕ್ಷರಿಮಂತ್ರವ [೧]ಹಗಲಿರುಳೆನ್ನದೆ[೧]
[೨]ಸದಾ[೨] ಸನ್ನಿಹಿತನಾ[೩]ಗಿ ಜಪಿಸಿದಾತನು ಅನಂತ [೪]ಪಾತಕಂಗಳ[೪] ಮೀರಿ
ಪರಮ ಪದವನೈದುತಿಪ್ಪನು ನೋಡಾ !

ಅಖಂಡೇಶ್ವರಾ ೧

ಆವನೊಬ್ಬನ ಹೃದಯದಲ್ಲಿ 'ಓಂ ನಮಃ ಶಿವಾಯ'
ಎಂಬ ಮಂತ್ರವು [೫]ನಿಶ್ಚಲ[೫]ವಾಗಿರಲು
ಆತಂಗೆ ಸಕಲ ಮಂತ್ರಂಗಳ ಸಕಲ ತಂತ್ರಂಗಳ ಹಂಗಿಲ್ಲ;
ಆತಂಗೆ ಸಕಲ ಶಾಸ್ತ್ರಂಗಳ ಸಕಲ [೬]ವಿದ್ಯಂಗಳ[೬]
ಅಭ್ಯಸಿಸಬೇಕೆಂಬ [೭]ಭ್ರಾಮಕ[೭]ವಿಲ್ಲ;
ಆತನಿರ್ದಲ್ಲಿ ಸಕಲ ಭುವನ ಸಕಲ ತತ್ತ್ವಂಗಳಿರ್ಪುವು.
ಆತ ನಿರಾವರಣ ನಿರುಪಮ ನಿರಾಲಂಬ ನಿಜಮುಕ್ತನು ನೋಡಾ.

ಅಖಂಡೇಶ್ವರಾ ೨

---

೧. ಹಗಲಿರುಳು ದಿವರಾತ್ರಿಯೆನ್ನದೆ (ಅ), ಹಗಲಿರುಳು ದಿವರಾತ್ರಿಯಲ್ಲಿ (ಕ)
೨. ಸದಾವಕಾಲದಲ್ಲಿ (ಅ) ೩. ವಾ (ಬ, ಕ) ೪. ಪಾಪಂಗಳ (ಅ, ಕ)
೫. ನಿಶ್ಚಯ (ಕ) ೬. ವಿದ್ಯೆವ (ಅ, ಬ, ಕ) ೭. ಭ್ರಮಿತ (ಕ)

ಏಳು ಕೋಟಿ ಮಹಾಮಂತ್ರಗಳ
ಉಪಮಂತ್ರ ಕೋಟ್ಯಾನುಕೋಟಿಗಳ
ಕಲಿತು ತೊಳಲಿ [೧]ಬಳಲುವುದೇಕೋ[೧],
ಭಾಳಾಕ್ಷನ ಮೂಲಮಂತ್ರ ಒಂದೇ ಸಾಲದೇ ?
ಸಕಲ ವೇದಂಗಳ ಮೂಲವಿದು; ಸಕಲ ಶಾಸ್ತ್ರಂಗಳ [೨]ಸಾರ[೨]ವಿದು.
ಸಕಲಾಗಮಂಗಳ ಅರುಹಿದು; ಸಕಲ ಮಂತ್ರಂಗಳ ಮಾತೆಯಿದು.
ಇಂತಪ್ಪ ಶಿವಮಂತ್ರವೆಂಬ ಸಂಜೀವನವು ಎನ್ನಂಗಕ್ಕೆ ಸಂಗಿಸಲಾಗಿ
[೩]ಎನಗೆ[೩] ಮರಣದ ಭಯ ಹಿಂಗಿತ್ತಯ್ಯಾ.
ಅಖಂಡೇಶ್ವರಾ ೩

ಶಿವಮಂತ್ರವೆನಗೆ ಕಾಮಧೇನುವಯ್ಯ !
ಶಿವಮಂತ್ರವೆನಗೆ ಕಲ್ಪವೃಕ್ಷವಯ್ಯ !
ಶಿವಮಂತ್ರವೆನಗೆ ಚಿಂತಾಮಣಿಯಯ್ಯ !
ಶಿವಮಂತ್ರವೆನಗೆ ಪರುಷದ ಖಣಿಯಯ್ಯ !
ಶಿವಮಂತ್ರವೆನಗೆ [೪]ಪುನಃ[೪] ಪ್ರಾಣಮೂಲಿಕೆಯಯ್ಯ.
ಅಖಂಡೇಶ್ವರಾ ೪

ಸಕಲ ವೇದಶಾಸ್ತ್ರಾಗಮಪುರಾಣಂಗಳೆಲ್ಲ
ಶಿವಮಂತ್ರದಲ್ಲಿ ಜನಿಸಿದುವಯ್ಯ.
ಸಕಲ ತತ್ತ್ವಶಕ್ತಿ ಮೂರ್ತಿಗಳೆಲ್ಲ ಶಿವಮಂತ್ರದಲ್ಲಿ ಜನಿಸಿದುವಯ್ಯ.
ಸಕಲ ಭುವನ ಬ್ರಹ್ಮಾಂಡ ಸಚರಾಚರಂಗಳೆಲ್ಲ
ಶಿವಮಂತ್ರದಲ್ಲಿಯೇ ಜನಿಸಿದುವಯ್ಯ.
ವಟಬೀಜ ನ್ಯಾಯದಂತೆ ಸಕಲ [೫]ವಿಸ್ತಾರವನೊಳಗೊಂಡಿರ್ಪ[೫]
ಪರಮ ಶಿವಮಂತ್ರವ ನೆನೆನೆನೆದು ಎನ್ನ ಮನದ ಮುಂದಣ
[೬]ಮರವೆಯ[೬] ಹರಿದು ಭವಸಾಗರವ ದಾಂಟಿದೆನಯ್ಯ.
ಅಖಂಡೇಶ್ವರಾ ೫

---

೧. ಬಳಲಲದೇಕೋ (ಅ), ಬಳಲುವದ್ಯಾತಕೋ (ಬ) ೨. ಸಾರಾಯ (ಕ) ೩. ಎನ್ನ (ಅ) ೪. ಗ್ನಾನಃ (ಕ) ೫. ವಿಸ್ತಾರವನೊಳಕೊಂಡಿರ್ಪ ಶಿವಮಂತ್ರದಲ್ಲಿಯೇ ಜನಿಸಿದವಯ್ಯ ಅಂತಪ್ಪ (ಅ) ವಿಸ್ತರನೂಳಕೊಂಡಿರ್ಪುದು ನೋಡಾ. ಆ (ಕ) ೬. ಮಾಯ (ಕ)

ಪಂಚಾಕ್ಷರಿ ಸ್ಥಲ

ಈ ಶಿವಷಡಕ್ಷರ ಮಂತ್ರದಿಂದೆ ಸಾನಂದ ಋಷಿಯು
ನರಕ ಜೀವಿಗಳನೆಲ್ಲ ಹರನ ೧ಓಲಗದಲ್ಲಿರಿಸಿದನು ನೋಡಾ.
ಈ ಶಿವಷಡಕ್ಷರ ಮಂತ್ರದಿಂದೆ ತಿರುಜ್ಞಾನಸಂಬಂಧಿಗಳು
ಕೂನಪಾಂಡ್ಯನ ವಾದವ ೨ಗೆದ್ದರು೨ ನೋಡಾ.
ಈ ಷಡಕ್ಷರ ಮಂತ್ರದಿಂದೆ ಶಿವಜಾತಯ್ಯನ ಶಿಷ್ಯ ಮಂತ್ರಜಾತಯ್ಯನು
ಮಹಾಬಯಲನೈದಿದನು ನೋಡಾ.
ಈ ಶಿವಷಡಕ್ಷರ ಮಂತ್ರದಿಂದೆ ಅಜಗಣ್ಣತಂದೆಗಳು
ನಿಜಲಿಂಗೈಕ್ಯರಾದರು ನೋಡಾ.
ಇಂತಪ್ಪ ಶಿವಷಡಕ್ಷರ ಮಂತ್ರವನು ಎನ್ನಂತರಂಗದ
ಅರುಹಿನ ಮನೆಯಲ್ಲಿ ಬಚ್ಚಿಟ್ಟುಕೊಂಡು
'ಓಂ ನಮಃ ಶಿವಾಯ' 'ಓಂ ನಮಃ ಶಿವಾಯ'
'ಓಂ ನಮಃ ಶಿವಾಯ' ಎಂದೆನುತಿರ್ದೆನಯ್ಯ.

ಅಖಂಡೇಶ್ವರಾ ೬

ನಾಲ್ಕು ೩ವರ್ಣ೩ ಹದಿನೆಂಟು ೪ಜಾತಿ೪
ನೂರೊಂದು ಕುಲದಲ್ಲಿ ಹುಟ್ಟಿದವನಾದಡಾಗಲಿ
ಅಧಮನಾದಡಾಗಲಿ ಮೂರ್ಖನಾದಡಾಗಲಿ ವಿದ್ವಾಂಸನಾದಡಾಗಲಿ
ಚಿದ್‌ರೂಪ ಶಿವಮಂತ್ರವನು ಶುದ್ಧ ಸಾವಧಾನದಿಂದೆ ಸ್ಮರಿಸಲು
೫ಹೊದ್ದಿ೫ರ್ದ ಪಾಪದ ೬ಪಡೆಯೆಲ್ಲ ಬಿದ್ದೋಡಿ೬ ಹೋಗುವುದು ನೋಡಾ.
ಅದೆಂತೆಂದೊಡೆ :

"ಅಂತ್ಯಜೋ ವಾಽಧಮೋ ವಾಽಪಿ ಮೂರ್ಖೋ ವಾ ಪಂಡಿತೋಽಪಿ ವಾ ।
೭ಜಪೇತ್ ಪಂಚಾಕ್ಷರೀಂ ವಿದ್ಯಾಂ ಜಪತಃ ಪ್ರಾಪ್ನುಯಾಚ್ಛಿವಂ ॥" ೭

ಎಂದುದಾಗಿ

ಇಂತಪ್ಪ ಪಂಚಾಕ್ಷರಿಯ ಮಹಿಮೆಯನೇನೆಂಬೆನಯ್ಯ.

ಅಖಂಡೇಶ್ವರಾ ೭

---

೧. ವಾ (ಅ, ಬ, ಕ) ೨. ಗೆಲಿದರು (ಅ, ಬ) ೩. ಜಾತಿ (ಅ, ಬ, ಕ)
೪. ವರ್ಣ (ಅ, ಬ, ಕ) ೫. ಪೊಂದಿ (ಕ) ೬. ಪಲ್ಲಟವಾಗಿ ಓಡಿ (ಕ)
೭. ಪಂಚಾಕ್ಷರ ಜಪೇ ನಿಷ್ಠೋ ಮುಚ್ಯತೇ ಪಾಪಬಂಧನಾತ್ (ಅ, ಬ, ಕ)

ಶಿವ ಶಿವಾ ಎಂದು ಶಿವನ ಕೊಂಡಾಡಿ
ಭವಪಾಶವ ಹರಿದೆನಯ್ಯ.
ಹರಹರಾ ಎಂದು ಹರನ ಕೊಂಡಾಡಿ
ಹರಗಣ ತಿಂಥಿಣಿಯೊಳಗೆ ನಿಂದೆನಯ್ಯ.
ಇದು ಕಾರಣ ಹರಾಯ ಶಿವಾಯ ಶ್ರೀ ಮಹಾದೇವಾಯ
'ಓಂ ನಮಃ ಶಿವಾಯ' ಎಂದೆನುತಿರ್ದೆನಯ್ಯ.

ಅಖಂಡೇಶ್ವರಾ ೮

ಅರಿಯದೆ ಒಂದು ವೇಳೆ 'ಓಂ ನಮಃ ಶಿವಾಯ' ಎಂದಡೆ
ಮರೆದು [1]ಮಾಡಿದ[1] ಹಿ[2]ಂದೇಳು ಜನ್ಮದ
ಕರ್ಮದ ಕಟ್ಟು ಹರಿದು ಹೋಯಿತ್ತು ನೋಡಾ.
ಅರಿದೊಂದು ವೇಳೆ 'ಓಂ ನಮಃ ಶಿವಾಯ' ಎಂದಡೆ
ದುರಿತ ಸಂಕುಳವೆಲ್ಲ [3]ದೂರಾಗಿಹವು[3] ನೋಡಾ.
ಇದು ಕಾರಣ 'ಓಂ ನಮಃ ಶಿವಾಯ' 'ಓಂ ನಮಃ ಶಿವಾಯ'
ಎಂಬ ಶಿವಮಂತ್ರವನು ಜಪಿಸಿ
[4]ನಾನಾ[4] ಭವದ ಬಳ್ಳಿಯ ಬೇರ ಕಿತ್ತೊಗೆದನಯ್ಯ.

ಅಖಂಡೇಶ್ವರಾ ೯

'ಓಂ ನಮಃ ಶಿವಾಯ' ಎಂಬುದೇ ಎನಗೆ ಧರ್ಮ ನೋಡಾ.
'ಓಂ ನಮಃ ಶಿವಾಯ' ಎಂಬುದೇ ಎನಗೆ ಅರ್ಥ ನೋಡಾ.
'ಓಂ ನಮಃ ಶಿವಾಯ' ಎಂಬುದೇ ಎನಗೆ ಕಾಮ ನೋಡಾ.
'ಓಂ ನಮಃ ಶಿವಾಯ' ಎಂಬುದೇ ಎನಗೆ ಮೋಕ್ಷ ನೋಡಾ.
'ಓಂ ನಮಃ ಶಿವಾಯ' ಎಂಬುದೇ ಎನಗೆ ಸರ್ವ ಕಾರಣ ನೋಡಾ.

ಅಖಂಡೇಶ್ವರಾ ೧೦

---

೧. ನುಡಿದರೆ (ಬ, ಕ)   ೨. ಪಿ. (ಬ,ಕ)   ೩. ದೂರವಾದವು (ಕ), ದೂರವಾಗಿಹವು (ಬ)  ೪. ನಾನು (ಅ)

ಓಂಕಾರವೆಂಬ ಮರಕ್ಕೆ ಷಟ್ಕೃತಿ[೧]ಯೆಂಬ[೧] ಶಾಖೆ ಪಸರಿಸಿ
ಷಡಕ್ಷರಗಳೆಂಬ ತಳಿರು ಕೊನರಿ ಷಟ್‌ಸ್ಥಲಗಳೆಂಬ ಕುಸುಮಂಗಳಾಗಿ
ಷಡುಲಿಂಗಂಗಳೆಂಬ ಮೋಕ್ಷದ ಮಧುರ ಫಲಂಗಳ
[೨]ತಳೆದಿರ್ಪುದು[೨] ನೋಡಾ.
ಇದನು ನಾನು ಶ್ರುತಿ ಗುರುವಚನ ಸ್ವಾನುಭಾವಂಗಳಿಂದರಿದು
ಓಂಕಾರವೆಂಬ ವೃಕ್ಷವನೇರಿ 'ಓಂ ನಮಃ ಶಿವಾಯ' 'ಓಂ ನಮಃ ಶಿವಾಯ'
'ಓಂ ನಮಃ ಶಿವಾಯ' ಎಂದು
ಆ ಷಡುಲಿಂಗಂಗಳೆಂಬ ಮೋಕ್ಷದ ಮಧುರ ಫಲಂಗಳನು ಸವಿದು
ನಿತ್ಯ ತೃಪ್ತನಾದೆನಯ್ಯ.
ಅಖಂಡೇಶ್ವರಾ ೧೧

ಎನ್ನ ಷಡ್‌ಧಾತುಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪು[೩]ವಯ್ಯ
ಎನ್ನ [೪]ಷಡೇಂದ್ರಿ[೪]ಯಂಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪು[೩]ವಯ್ಯ
ಎನ್ನ ಷಡ್[೫]ಭಾವ[೫]ಂಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪು[೩]ವಯ್ಯ
ಎನ್ನ ಷಡೂರ್ಮೆಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪು[೩]ವಯ್ಯ.
ಎನ್ನ ಷಡ್ವರ್ಗಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪು[೩]ವಯ್ಯ
ಎನ್ನ ಷಟ್ಕರಣಂಗಳೆಲ್ಲ ಷಡಕ್ಷರ ಮಂತ್ರ ಸ್ವರೂಪವಾಗಿ
ತೋರುತಿಪ್ಪು[೩]ವಯ್ಯ

---

೧. ಗಳೆಂಬ (ಆ) ೨. ತಾಳಿರ್ಪುದು (ಅ, ಕ), ತಳಿತಿರ್ಪುದು (ಡ)
೩. ರ್ಪ (ಅ, ಬ, ಕ) ೪. ಷಡ್ವಿಂದ್ರಿ (ಆ), ಷಡಿಂದ್ರಿ (ಕ)
೫. ಭೂತ (ಅ, ಬ, ಕ)

ಇದು ಕಾರಣ 'ಓಂ ನಮಃ ಶಿವಾಯ' 'ಓಂ ನಮಃ ಶಿವಾಯ'
'ಓಂ ನಮಃ ಶಿವಾಯ' ಎಂಬ ನಿಮ್ಮ ಸಾಮಾಮೃತವನುಂಡು
ನಿತ್ಯ ಮುಕ್ತನಾದೆನಯ್ಯ.

ಅಖಂಡೇಶ್ವರಾ ೧೨

ಎನ್ನ ಸ್ಥೂಲತನುವೆಂಬ ಮನೆಯಲ್ಲಿ
೧ಲಿಂಗವೆಂಬ ಜ್ಯೋತಿಯ೧ ತುಂಬಿದೆನಯ್ಯ.
ಎನ್ನ ಸೂಕ್ಷ್ಮತನುವೆಂಬ ಮನೆಯಲ್ಲಿ
೨ಮಂತ್ರವೆಂಬ ಜ್ಯೋತಿಯ೨ ತುಂಬಿದೆನಯ್ಯ.
ಎನ್ನ ಕಾರಣತನುವೆಂಬ ಮನೆಯಲ್ಲಿ
೩ಜ್ಞಾನವೆಂಬ೩ ಜ್ಯೋತಿಯ ತುಂಬಿದೆನಯ್ಯ.
ಎನ್ನ ಒಳಹೊರಗೆ ತುಂಬಿ ೪ಬೆಳಗುವ೪
ಜ್ಯೋತಿಯ ಬೆಳಗಿನೊಳಗೆ ಸುಳಿವುತಿರ್ದೆನಯ್ಯ.

ಅಖಂಡೇಶ್ವರಾ ೧೩

## ಅಂತು ವಚನಗಳು ೧೦೩

---

೧. ಇಷ್ಟಲಿಂಗವೆಂಬ ಮಂತ್ರಮೂರ್ತಿಯ (ಅ) ೨. ಪ್ರಾಣಲಿಂಗವೆಂಬ ಮಂತ್ರಮೂರ್ತಿಯ (ಅ) ೩. ಭಾವಜ್ಞಾನವೆಂಬ ಮಂತ್ರ (ಅ) ೪. ತೊಳಗಿ ಬೆಳಗುವ (ಅ)

# ಭಕ್ತ[೧] ಸ್ಥಲ

ಶಿವಭಕ್ತಿ ಶಿವಜ್ಞಾನ ಶಿವನಲ್ಲಿ ವಿಶ್ವಾಸವ ಮಾಡಿದ
ಲಿಂಗಾಂಗ ಸಂಬಂಧವನುಳ್ಳ ಸದ್ಭಕ್ತ ಮಹೇಶ್ವರರು
ಇದ್ದ ಠಾವೆಲ್ಲ ಶಿವಕ್ಷೇತ್ರ;
ಅವರು ಸುಳಿದ ಸುಳುವೆಲ್ಲ ಜಗತ್ಪಾವನ;
ಅವರು ನಿಮಿ[೨]ಷಂ ನಿಮಿ[೨]ಷಾರ್ಧ ಕುಳಿತ ನೆಲವೆಲ್ಲ
ಶಿವನ ಕೈಲಾಸ ನೋಡಾ.
ಅದೆಂತೆಂದೊಡೆ : ಸ್ಕಂದಪುರಾಣೇ

"ಯತ್ರ ತಿಷ್ಠತಿ ಲಿಂಗಾಂಗಸಂಬಂಧೀಶ ಪರಾಯಣಃ ।
ನಿಮಿ[೨]ಷಂ ನಿಮಿ[೨]ಷಾರ್ಧಂ ವಾ ತತ್ ಶಿವಕ್ಷೇತ್ರ ಮುಚ್ಯತೇ ॥"

ಮತ್ತಂ

"ಪಾದಾಗ್ರರೇಣವೋ ಯತ್ರ ಪತಂತಿ ಶಿವಯೋಗಿನಾಮ್ ।
ತದೇವಸದನಂ ಪುಣ್ಯಂ ಪಾವನಂ ಶಿವಮಂದಿರಮ್ ॥"

ಎಂದುದಾಗಿ

ಇಂತಪ್ಪ ಸದ್ಭಕ್ತಮಹೇಶ್ವರರ ಘನವ ನಾನೇನೆಂಬೆನಯ್ಯ.

ಅಖಂಡೇಶ್ವರಾ ೧

ಶಿವ ಶಿವಾ ಎನ್ನಿರೋ ! ಶಿವನ ಧ್ಯಾನಕ್ಕೆ ತನ್ನಿರೋ !
ಶಿವನು ಕೈಲಾಸ ಮೇರು ಮಂದಾರದಲ್ಲಿಲ್ಲ ನೋಡಿರೋ !
ಶಿವನು ಭಕ್ತಿಗೆ ಸೋತು ನಿಮ್ಮೊಳಗಿಪ್ಪನು ಕಾಣಿರೋ !

---

೧. ಕ್ತಿ (ಅ, ಬ, ಕ)   ೨. ಮು (ಅ, ಕ)

ಅದೆಂತೆಂದೊಡೆ : ಶಿವನವಾಕ್ಯ

"ನಾಹಂ ವಸಾಮಿ ಕೈಲಾಸೇ ನ ಮೇರೌ ನ ಚ ಮಂದರೇ ।
ಮದ್‌ಭಕ್ತಾ ಯತ್ರ ತಿಷ್ಠಂತಿ ತತ್ರ ತಿಷ್ಠಾಮಿ ಪಾರ್ವತೀ ॥"

ಎಂದುದಾಗಿ

ಆಲಸ್ಯವಿಲ್ಲದೆ ಒಲಿಸಿರೋ ನಮ್ಮ ಅಖಂಡೇಶ್ವರನೆಂಬ ಪರಶಿವನ ! ೨

ಅಕುಲಜ ಅಧಮ ಮೂರ್ಖನಾದಡಾಗಲಿ
ಮುಕ್ಕಣ್ಣ ಹರನ ಭಕ್ತಿಯ ಹಿಡಿದಾತನು ಸಿಕ್ಕಬಲ್ಲನೇ ಯಮನ ಬಾಧೆಗೆ ?
ಆತನು ದೇವದಾನವ ಮಾನವರೊಳಗೆ ಪೂಜ್ಯನು ನೋಡಾ.
ಅದೆಂತೆಂದೊಡೆ : ಶಿವಧರ್ಮೇ

"ಅಂತ್ಯಜೋ ವಾಽಧಮೋ ವಾಽಪಿ ಮೂರ್ಖೋ ವಾ ಪಂಡಿತೋಽಪಿ ವಾ ।
ಶಿವಭಾವಂ ಪ್ರಪನ್ನಶ್ಚೇತ್ ಪೂಜ್ಯಸ್ಸರ್ವೈಸ್ಸುರಾಸುರೈಃ ॥"

ಎಂದುದಾಗಿ

ಶಿವಭಕ್ತನೇ ಶ್ರೇಷ್ಠನು ನೋಡಾ.

ಅಖಂಡೇಶ್ವರಾ ೩

ಶಿವ ಶಿವಾ ! ಶಿವಭಕ್ತನಿರ್ದ ಹಳ್ಳಿಯಾದಡಾಗಲಿ
ಪಟ್ಟಣವಾದಡಾಗಲಿ [೧]ಹೊರಗೇರಿ[೧]ಯಾದಡಾಗಲಿ
ಶ್ರೇಷ್ಠಭೂಮಿಯಾದಡಾಗಲಿ ಕನಿಷ್ಠ ಭೂಮಿಯಾದಡಾಗಲಿ
ಆತನಿರ್ದ ಸ್ಥಾನವೇ ಶಿವಲೋಕವೆನಿಸಿತ್ತು.
ಆತನಿರ್ದ ಮನೆಯೇ ಶಿವಮಂದಿರವೆನಿಸಿತ್ತು.
ಆತನಿರ್ದ ದೇಶಕ್ಕೆ ಹಸಿವು ತೃಷೆ ದುರ್ಭಿಕ್ಷವಿಲ್ಲ.
ಆದಿ ವ್ಯಾಧಿ ರೋಗ[೨] ರುಜೆ[೨] ವಿಪತ್ತುಗಳಿಲ್ಲ ನೋಡಾ.

---

೧. ಘೋರಕೇರಿ (ಕ) ಹೊಲಿಗೇರಿ (ಅ, ಬ) ೨. ರುಜಿನ (ಅ, ಬ, ಕ)
೩. ಆ (ಕ)

ಅದೆಂತೆಂದೊಡೆ : ಲಿಂಗಪುರಾಣೇ

"ರುದ್ರಾಧ್ಯಾಯೀ ವಸೇದ್ಯಸ್ತು ಗ್ರಾಮೇವಾ ನಗರೇಽಪಿ ವಾ ।
ನ ತತ್ರ ಕ್ಷುತ್ ಪಿಪಾಸಾದ್ಯಾ ದುರ್ಭಿಕ್ಷವ್ಯಾಧಯೋಽಪಿ ವಾ ॥"

ಮತ್ತಂ :

"ಚಾಂಡಾಲವಾಟಿಕಾಯಾಂ ಶಿವಭಕ್ತಃ ಸ್ಥಿತೋ ಯದಿ ।
೧ತದ್ಭೂಮಿಃ೧ ಶ್ರೀಪ್ತಲೋಕಸ್ತು ತದ್ಗೃಹಂ ಶಿವಮಂದಿರಮ್ ॥"

ಎಂದುದಾಗಿ

ಇಂತಪ್ಪ ಪರಮಶಿವಭಕ್ತನ ದರ್ಶನವು ಪುಣ್ಯದ ಪುಂಜವು ನೋಡಾ

ಅಖಂಡೇಶ್ವರಾ ೪

ಪಂಚಮಹಾಪಾತಕಂಗಳ ಮಾಡಿದವನಾಡಡಾಗಲಿ
ಉಪಪಾತಕಂಗಳ ಕೋಟ್ಯನು೨ಕೋಟಿ ಮಾಡಿದವನಾದಡಾಗಲಿ
ಹತ್ತುಸಾವಿರ ಬ್ರಹ್ಮಹತ್ಯವ ಮಾಡಿಧವನಾದಡಾಗಲಿ
ಒಬ್ಬ ಶಿವಭಕ್ತನ ದರ್ಶನವಾದಲ್ಲಿ
ಆ ಪಾತಕಂಗಳು ಬೆಂದು ಭಸ್ಮವಾಗಿ ಹೋಗುವವು ನೋಡಾ.
ಅದೆಂತೆಂದೊಡೆ : ಲಿಂಗಪುರಾಣೇ

"ಉಪಪಾತಕ ಕೋಟೀಶ್ಚ ಬ್ರಹ್ಮಹತ್ಯಾಯುತಾನಿ ಚ ।
ದಹತ್ಯಶೇಷಪಾಪಾನಿ ಶಿವಭಕ್ತಸ್ಯ ದರ್ಶನಂ ॥"

ಎಂಬುದಾಗಿ

೩ಶಿವಭಕ್ತನೇ ಶಿವನು೩ ನೋಡಾ.

ಅಖಂಡೇಶ್ವರಾ ೫

ಸದ್ಭಕ್ತನಾ೪ದಾತನು೪ ಸತ್‌ಪಾತ್ರದಾನಯುಕ್ತನಾಗಿರಬೇಕಲ್ಲದೆ
ಅಪಾತ್ರದಾನವ ಮಾಡಲಾಗದು ನೋಡಾ.

---

೧. ತತ್‌ಶ್ರೇಣಿ (ಅ), ೨. ಟಾನು (ಅ, ಬ, ಕ) ೩. ಶಿವಭಕ್ತನು ಶಿವನೇ (ಕ), ಶಿವಭಕ್ತನು ಶಿವನು (ಅ) ೪. ದಡಾಗಲಿ (ಬ, ಇ)

ಅಪಾತ್ರವೆಂದೊಡೆ : ನಾಲ್ಕು ವೇದವನೋದಿದ ಬ್ರಾಹ್ಮಣನಾದಡಾಗಲಿ
ಶಿವಭಕ್ತಿಯಿಲ್ಲದವಂಗೆ ಗೋದಾನ ಭೂದಾನ ಸುವರ್ಣದಾನ
ಕನ್ನಿಕಾದಾನಂಗಳ ಕೊಟ್ಟರೆ ಮುಂದೆ ನರಕ ತಪ್ಪದು ನೋಡಾ.
ಅದೆಂತೆಂದೊಡೆ : ಲಿಂಗಪುರಾಣೇ

"ಚತುರ್ವೇದಧರೋ ವಿಪ್ರಃ ಯದಿ ಶಿವಭಕ್ತಿವಿವರ್ಜಿತಃ ।
ತಸ್ಮೈ ಕಾಂಚನದಾನೇನ ದಾತಾರಂ ನರಕಂ ವ್ರಜೇತ್ ॥"

ಎಂದುದಾಗಿ

ಅಪಾತ್ರದಾನ ನಾಯಕನರಕ ನೋಡಾ.

ಅಖಂಡೇಶ್ವರಾ ೬

ಬ್ರಾಹ್ಮಣನ ದರ್ಶನ ಪಾಪದ ಪುಂಜ ನೋಡಾ.
ಬ್ರಾಹ್ಮಣನಿಗೆ ಕೊಟ್ಟದಾನ ಅಪಾತ್ರ ದೋಷ ದಾರಿದ್ರ್ಯತೆ ನೋಡಾ.
ಶಿವಭಕ್ತಿಯಿಲ್ಲದ ಬ್ರಾಹ್ಮಣನಿಗೆ ವಂದನೆಯ ಮಾಡಿದರೆ
ಮುಂದೆ ಶುನಿಶೂಕರ ಬಸಿರಲ್ಲಿ ಬಪ್ಪುದು ತಪ್ಪದು ನೋಡಾ.
ಅದೆಂತೆಂದೊಡೆ :

೧"ಶಿವಭಕ್ತಿ ವಿಹೀನಸ್ಯ ಬ್ರಾಹ್ಮಣಸ್ಯ ತು ದರ್ಶನಮ್ ।
ಕೃತ್ವಾತು ಮಾನವೋ ಯಾತಿ ಕಿಟಿಜನ್ಮ ಪದೇಪದೇ ॥"೧

ಎಂದುದಾಗಿ

ಇಂತಪ್ಪ ಹರಿಕುಲದ ಹಾರುವರ ಮುಖವ ನೋಡಲಾಗದಯ್ಯಾ.

ಅಖಂಡೇಶ್ವರಾ ೭

' ಜಂಗಮವೇ ಜಗದ್ಭರಿತನು ನೋಡಾ.
ಜಂಗಮವೇ ಜಗದೀಶ್ವರ೨ನು ನೋಡಾ.
ಜನನನಾಶ ಮರಣ ವಿಹಿತನಾದ
ಒಬ್ಬ ಪರಮ ಜಂಗಮನ ದರ್ಶನವ ಮಾಡಿದರೆ

---

೧. ಬ್ರಹ್ಮಣಸ್ಸಂದರ್ಶನಶ್ಚೈವ । ಪಾಪಪುಂಜರಮೇವಚ
ಬ್ರಹ್ಮಣಂ ವಂದನಶ್ಚೈವ ಕೋಟಿ ಜನ್ಮೇನ ಶೂಕರಃ (ಅ, ಬ, ಕ)
೨. ಶ (ಬ, ಕ)

ಒಂದು ಕೋಟಿ ಲಿಂಗಂಗಳ ದರ್ಶನವಾದಂತೆ ನೋಡಾ.
ಆ ಜಂಗಮದ ಚರಣ ಕಮಲದ ಮೇಲೆ ಲಲಾಟವನ್ನಿಟ್ಟು[೧]
ಶರಣು ಮಾಡಿದರೆ ಶತಕೋಟಿದೋಷಪರಿಹರ ನೋಡಾ.
ಅದೆಂತೆಂದೊಡೆ :

> "ಪ್ರಭಾತೇ ಜಂಗಮಂ ದೃಷ್ಟ್ವೇ ಕೋಟಿಲಿಂಗಂತು ದರ್ಶನಮ್ ।
> ಲಲಾಟೇ ಚರಣಮಧ್ಯಸ್ತು ಕೋಟಿಕರ್ಮ ವಿನಶ್ಯತಿ ॥"

ಎಂದುದಾಗಿ
ಇಂತಪ್ಪ ಪರತರ ಪರಂಜ್ಯೋತಿ ಜಂಗಮವು ನೀನೆಯಯ್ಯಾ.
ಅಖಂಡೇಶ್ವರಾ ೮

ಚತುರ್ವೇದಿಗಳಾದ ಶತಕೋಟಿ ಬ್ರಾಹ್ಮಣರಿಗೆ
ನಿತ್ಯ ಭೋಜನ ಮಾಡಿಸಿದ ಫಲವು
ಒಬ್ಬ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದ ಫಲಕ್ಕೆ
ಸರಿಯಿಲ್ಲ ನೋಡಿರೋ !
ಸಪ್ತಕೋಟಿ ಕೆರೆಯ ಕಟ್ಟಿಸಿದ ಫಲವು
ಒಬ್ಬ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದ ಫಲಕ್ಕೆ
ಸರಿಯಿಲ್ಲ ನೋಡಿರೋ !
ಅಶ್ವಯಜ್ಞಂಗಳ ಸಹಸ್ರಕೋಟಿ ಮಾಡಿದ ಫಲವು
ಒಬ್ಬ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದ ಫಲಕ್ಕೆ
ಸರಿಯಿಲ್ಲ ನೋಡಿರೋ !
ಅದೆಂತೆಂದೊಡೆ :

> "ಶತಕೋಟಿವೇದವಿಪ್ರಾಣಾಂ ತಟಾಕಸಪ್ತಕೋಟಿನಾಮ್ ।
> ವಾಜಿಕೋಟಿಸಹಸ್ರಾಣಾಮೇಕಭಿಕ್ಷಾಸಮರ್ಪಣಮ್ ॥"

ಎಂದುದಾಗಿ
ನಮ್ಮ ಅಖಂಡೇಶ್ವರ ಸ್ವರೂಪವಾದ ನಿಜ ಜಂಗಮಕ್ಕೆ ನೀಡಿದ ಫಲಕ್ಕೆ
ಇನ್ನಾವ ಫಲವು ಸರಿಯಿಲ್ಲ ನೋಡಿರೋ ! ೯

---

೧. ನಿಕ್ಕಿ (ಅ, ಕ)

ಮತ್ತೆ ಕೇಳಿರೋ ! ಸತ್ಪಾತ್ರ ಜಂಗಮಕ್ಕೆ ಇತ್ತ ಪುಣ್ಯವು
ಸಾವಿರ ಕೊಡ ವಾಲು ದಾನದ ಫಲವು.
ಮಲಹರ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದಲ್ಲುಂಟು ನೋಡಿರೋ !
ನೂರು ಕೊಡ ತುಪ್ಪದ ದಾನದ ಫಲವು.
ಮಲಹರ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದಲ್ಲುಂಟು ನೋಡಿರೋ !
ಕೋಟಿ ಯಜ್ಞಂಗಳ ಮಾಡಿದ ಫಲವು.
ಮಲಹರ ಜಂಗಮಕ್ಕೆ ತುತ್ತು ಭಿಕ್ಷವ ನೀಡಿದಲ್ಲುಂಟು ನೋಡಿರೋ !
ನೂರು ಕೊಡ ತುಪ್ಪದ ದಾನದ ಫಲವು.
ಅದೇಂತೆಂದೊಡೆ :

"ಕ್ಷೀರಕುಂಭಸಹಸ್ರಾಣಿ ಘೃತಕುಂಭಶತೈರಪಿ ।
ಭಸ್ಮಾಂಗೀ ಭಿಕ್ಷಮಾತ್ರೇಣ ಕೋಟಿಯಜ್ಞಫಲಂ ಭವೇತ್ ॥"

ಎಂದುದಾಗಿ
ಜಂಗಮಕ್ಕೆ ನೀಡಿ ನಮ್ಮ ಅಖಂಡೇಶ್ವರಲಿಂಗನೊಲಿಸಿರೋ ೧೦

ತೆಂಗಿಗೆ ನೀರನೆರೆದರೆ ಅಂಗೈಯಲ್ಲಿ ಫಲವು ಕಾಣುವಂತೆ
ಜಂಗಮಕ್ಕೆ ಅನ್ನ ಉದಕಂಗಳ ನೀಡಿದ ಫಲವು
ಮೇರು ಪರ್ವತಕ್ಕೆ, ಸಪ್ತಸಮುದ್ರಕ್ಕೆ ಸಮಾನವಹುದು.
ಅದಲ್ಲದೆ ಒಂದೊಂದು ಅಗುಳಿಗೆ
ಕೋಟ್ಯನುಕೋಟಿ ಯಜ್ಞಂಗಳ ಮಾಡಿದ ಫಲವಹುದು.
ಅದೆಂತೆಂದೊಡೆ :

"[1]ಕ್ಷಿಪ್ತಂ ಕ್ಷಿಪ್ತಂ[1] ಮಹಾದೇವೀ ಕೋಟಿಯಜ್ಞಫಲಂ ಭವೇತ್ ।
[2]ಅಲ್ಪಬೀಜಾತ್ ಮಹಾವೃಕ್ಷೋ ಯಥಾ ಭವತಿ ಪಾರ್ವತೀ[2] ॥"

---

೧. ಕ್ಷಿಪ್ತಂ ಕ್ಷಿಪ್ತಂ (ಅ, ಬ, ಕ).
೨. ಅಲ್ಪಬೀಜಂ ವಟಾವೃಕ್ಷಂ ಅಲ್ಪದಾನೇನ ಪರ್ವತಂ (ಅ, ಬ, ಕ)

ಮತ್ತಂ !

"ಅನ್ನಂ ವಾ ಜಲಮಾತ್ರಂ ವಾ ಯತ್ ದತ್ತಂ ಲಿಂಗಧಾರಿಣೇ ।
ತದನ್ನಂ ಮೇರುಸದೃಶಂ ತತ್ ಜಲಂ ಸಾಗರೋಪಮಮ್ ॥"

ಎಂದುದಾಗಿ

ಜಂಗಮದಲ್ಲಿ ನಮ್ಮ ಅಖಂಡೇಶ್ವರಲಿಂಗ[೧]ದ ತೃಪ್ತಿ[೧] ನೋಡಾ. ೧೧

ಜಂಗಮಕ್ಕೆ ನೀಡಿದ ತೃಪ್ತಿ
ಜಗಕ್ಕೆಲ್ಲ ತೃಪ್ತಿಯಾಯಿತ್ತು [೨]ಕಾಣಿ[೨]ರೋ !
ಜಂಗಮಕ್ಕೆ ನೀಡಿದ ತೃಪ್ತಿ
ಹರಿ ಸುರ ಬ್ರಹ್ಮಾದಿಗಳಿಗೆಲ್ಲ ತೃಪ್ತಿಯಾಯಿತ್ತು [೨]ಕಾಣಿ[೨]ರೋ !
ಜಂಗಮಕ್ಕೆ ನೀಡಿದ ತೃಪ್ತಿ ಸ್ವರ್ಗ ಮರ್ತ್ಯ ಪಾತಾಳ
ಸಚರಾಚರಂಗಳಿಗೆಲ್ಲ ತೃಪ್ತಿಯಾಯಿತ್ತು ನೋಡಿರೋ !
ಜಂಗಮಕ್ಕೆ ನೀಡಿದ ತೃಪ್ತಿ
ಸಾಕ್ಷಾತ್ಪರಬ್ರಹ್ಮ ಪರಶಿವಂಗೆ ತೃಪ್ತಿಯಾಯಿತ್ತು ನೋಡಿರೋ !
ಅದೆಂತೆಂದೊಡೆ :

"ಸುರತೃಪ್ತಂ ಬುಧಸ್ತೋಮಂ ಮಮ ತೃಪ್ತಂ ತು ವೈಷ್ಣವಮ್ ।
ಜಂಗಮಂ ಜಗತ್ ತೃಪ್ತಂ ತು ಶಿವತೃಪ್ತಂ ತು ಪದ್ಮಿನಿ ॥"

ಎಂದುದಾಗಿ

ಇಂತಪ್ಪ ಜಂಗಮ ತೃಪ್ತಿಯಾದಡೆ
ನಮ್ಮ ಅಖಂಡೇಶ್ವರಲಿಂಗ ತೃಪ್ತಿಯಾಯಿತ್ತು ನೋಡಿರೋ ! ೧೨

ಆಲಸ್ಯವೇತಕೋ ಲಿಂಗಪೂಜೆ ಮಾಡುವುದಕ್ಕೆ ?
ಆಲಸ್ಯವೇತಕೋ ಜಂಗಮವನರ್ಚಿಸುವುದಕ್ಕೆ ?
ಆಲಸ್ಯವೇತಕೋ ನಮ್ಮ ಅಖಂಡೇಶ್ವರಲಿಂಗವನೊಲಿಸುವುದಕ್ಕೆ ? ೧೩

---

೧. ತೃಪ್ತಿವಡೆದನು (ಕ, ಅ), ತೃಪ್ತಿಯಾಯಿತ್ತು (ಬ)
೨. ನೋಡಿ (ಅ, ಬ, ಕ)

ಇಂದುನಾಳೆಯೆಂಬ ಮಂದಬುದ್ಧಿಗೆ ಸಂದುಗೊಡದಿರಣ್ಣಾ !
[೧]ಅನಿತ್ಯ[೧]ಕಾಲವನರಿದು ಶ್ರೀ ಮಹಾದೇವನ ಪೂಜಿಸಿರಣ್ಣಾ !
[೨]ನೀರುಗುಳ್ಳೆ[೨]ಯಂತೆ ತೋರಿ ಅಡಗುವ ಅನಿತ್ಯಶರೀರದ ಭೋಗವು
ನಿತ್ಯವೆಂದು ನಚ್ಚಿ ಹೊತ್ತುಕಳೆದು ವ್ಯರ್ಥವಾಗಿ ಸತ್ತುಹೋಗದಿರಣ್ಣಾ !
ಕರ್ತೃ ಗುರುಲಿಂಗಜಂಗಮಕ್ಕೆ ಅರ್ಥಪ್ರಾಣಾಭಿಮಾನಂಗಳ [೩]ಸವಿಸಿ[೩]
ನಿತ್ಯಪದವ ಸಾಧಿಸಿರಣ್ಣ ನಮ್ಮ ಅಖಂಡೇಶ್ವರ ಲಿಂಗದಲ್ಲಿ. ೧೪

ಸಿರಿ ಬಂದೊದಗಿತ್ತೆಂದು ಹಿರಿದಾಗಿ ಹಿಗ್ಗಬೇಡ;
ಸಿರಿಯೆಂಬುದು ಕನಸಿನ ಪರಿಯಂತೆ ಕಂಡೆಯಾ !
ಎಲೆ ಮರುಳು ಮಾನವ ಇದನರಿತು ನಂಬಿ
ಶ್ರೀ ಮಹಾದೇವನ ಪೂಜಿಸಿದರೆ
ಸ್ಥಿರವಾದ ಪದವನೀವ ನಮ್ಮ ಅಖಂಡೇಶ್ವರ. ೧೫

ಮಡದಿ ಮಕ್ಕಳು, ಪಡೆದ ದ್ರವ್ಯವು ಎನ್ನೊಡವೆ ಎಂದು
ನಚ್ಚಬೇಡಿರೋ ಎಲೆ ಹುಚ್ಚು ಮಾನವರಿರಾ !
ಅವು ನಿಮ್ಮೊಡವೆಯಾದರೆ
ನೀವು ಮಡಿದು ಹೋಗುವಾಗ ನಿಮ್ಮೊಡನೆ ಬಪ್ಪವೇ ಹೇಳಿರೋ ?

"ಅಸ್ಥಿರಂ ಜೀವನಂ ಲೋಕೇ ಅಸ್ಥಿರಂ ಧನಯೌವನಂ ।
ಅಸ್ಥಿರಾಃ ಪುತ್ರನಾರೀ ಚ ಸತ್ಯಧರ್ಮಃ ಪುನಃ ಸ್ಥಿರಃ ॥"

ಇದನರಿತು ತಡೆಯದೆ ಮೃಡನ ಸೇವೆಯ ತೊಡಗಿದರೆ
ಕಡೆ ಮೊದಲಿಲ್ಲದ ಪದವು ದೊರೆಕೊಂಬುದು [೪]ನೋಡಿರೋ[೪]
ನಮ್ಮ ಅಖಂಡೇಶ್ವರ ಲಿಂಗದಲ್ಲಿ. ೧೬

---

೧. ಅನಂತ (ಕ), ಆನಂದಿ (ಅ), ಆನಿಂದ (ಬ)
೨. ನೀರಗುಳ್ಳಿ (ಅ), ನೀರಗುರುಳಿ (ಬ), ನೀರಮ್ಯಾಲಿನ ಗುರುಳಿ (ಕ)
೩. ಸಮರ್ಪಿಸಿ (ಅ) ೪. ನೋಡಾ (ಅ, ಬ, ಕ)

ಮಹೇಂದ್ರಜಾಲದಂತೆ ಕಣ್ಣಮುಂದೆ ಒಡ್ಡಿದ
ಹುಸಿಯ ಸಂಸಾರದಲ್ಲಿ[1]ಯೇ ಎಡ್ಡಾಗಬೇಡಿರೋ[1] !
ಎಲೇ [2]ಎಡ್ಡ[2] ಪ್ರಾಣಿಗಳಿರಾ, ಅಡ್ಡದಾಸೆಗೆ ದುಡ್ಡಿನ ಲಾಭವ ಕಳೆವರೇ ?
ಗುರುಲಿಂಗಜಂಗಮದ ಸೇವೆಯ ತೊರೆದು ಸಂಸಾರದಲ್ಲಿ ಬೆರೆದರೆ
ಮುಂದೆ ನರಕದಲ್ಲಿಕ್ಕುವ ನಮ್ಮ ಅಖಂಡೇಶ್ವರ. ೧೭

ಸುರಚಾಪದಂತೆ ತೋ[3]ರಿ ಅ[3]ಡಗುವ ತನುವ [4]ನೆಚ್ಚ[4]ಬೇಡಿರೋ !
ಸಚ್ಚಿದಾನಂದ ಗುರುಲಿಂಗಜಂಗಮದ ಪೂಜೆಯ ನಿಚ್ಚ ನಿಚ್ಚ ಮಾಡಿದರೆ
ಮಚ್ಚಿ ಮಹಾಪದವಿಯನೀವ ನಮ್ಮ ಅಖಂಡೇಶ್ವರ. ೧೮

ಇಮ್ಮನ ಭಕ್ತಂಗೆ ಕರ್ಮದ ವಿಧಿ ಕಾಡುತಿರ್ಪುದು ನೋಡಾ !
ಆ ಇಮ್ಮನವಳಿದು ಒಮ್ಮನವಾಗಿ ನಿಮ್ಮನರಿತರೆ
ಕರ್ಮದ ವಿಧಿ ಬಿಟ್ಟೋಡಿತ್ತು ನೋಡಾ.
ಅಖಂಡೇಶ್ವರಾ ೧೯

ಅಂಜನಸಿದ್ಧಿಯ ಸಾಧಿಸುವ ಅಣ್ಣಗಳ ಕಣ್ಮನಕ್ಕೆ
ಮಂಜುಗವಿಸಿ ಹೊರಗಾದನು ನೋಡಾ ಪರಶಿವನು.
ಘುಟಿಕಾಸಿದ್ಧಿಯ ಸಾಧಿಸುವ ಅಣ್ಣಗಳ ಕಣ್ಮನಕ್ಕೆ
ಸಟೆಯ ತೋರಿಸಿ ಹೊರಗಾದನು ನೋಡಾ ಪರಶಿವನು.
ಯಂತ್ರ ಮಂತ್ರ ತಂತ್ರ ಸಿದ್ಧಿ ವಾದ ವಶ್ಯವ ಸಾಧಿಸುವ ಅಣ್ಣಗಳ ಕಣ್ಮನಕ್ಕೆ
ಗಾಢಕತ್ತಲೆಗವಿಸಿ ಹೊರಗಾದನು ನೋಡಾ ಪರಶಿವನು.
ಭಕ್ತಿಸಿದ್ಧಿಯ ಸಾಧಿಸುವ ಅಣ್ಣಗಳ ಮನಕ್ಕೆ ಮುಕ್ತಿಯ ಬೆಳಗನೇ ತೋರಿ
ಒಳಗಾಗಿರ್ಪನು ನೋಡಾ ನಮ್ಮ ಅಖಂಡೇಶ್ವರನೆಂಬ ಪರಶಿವನು. ೨೦

ವಿದ್ಯೆಯ ಬಹಳ ಕಲಿತಡೇನು ಭಕ್ತಿಯಲ್ಲಿ [5]ಶುದ್ಧನಲ್ಲದವನು ?[5]
ಬುದ್ಧಿಯಲ್ಲಿ ವಿಶೇಷವೆನಿಸಿದಡೇನು [6]ಭಕ್ತಿಯಲ್ಲಿ ಬಡವನಾದವನು ?[6]

---

೧. ಮೋಹಿಸಿ ಮರುಳಾಗುವರೇ (ಅ), ಅಡಗ ಬ್ಯಾಡಿರೋ (ಕ)
೨. ದಡ್ಡ (ಅ, ಬ, ಕ) ೩. ರ (ಅ, ಬ) ೪. ನಚ್ಚಿಕೆಡ (ಅ)
೫. ಶುದ್ಧಿಯಿಲ್ಲದಾತನು (ಬ) (ಕ) ೬. ಬಡಮನದವನು (ಕ)

ಅರ್ಥದಲ್ಲಿ ಅಧಿಕನಾದಡೇನು ಕರ್ತೃಶಿವನ ನೆನೆಯದವನು ?
ಷುದ್ಧಗುಣಿಕೆಯ್ತು ತಿಂದ ಮದೋನ್ಮತ್ತರ ಎನ್ನತ್ತ ತೋರದಿರಯ್ಯ.
ಅಖಂಡೇಶ್ವರಾ ೨೧

ಗಾಳಿಬೀಸುವ ವೇಳೆಯಲ್ಲಿ ತೂರಿಕೊಳ್ಳಿರೋ ಬೇಗ ಬೇಗ !
ಗಾಳಿ ನಿಮ್ಮಿಚ್ಛೆಯಲ್ಲ ಕೇಳಿರೋ !
ಜಾಳ ಮನುಜರಿರಾ,
ಅಂಗಕ್ಕೆ ಅಳಿವು ಬರುವುದು ದೂರವಿಲ್ಲ ನೋಡಿರೋ !

"ತ್ವರಿತಂ ಜೀವಿತಂ ಯಾತಿ ತ್ವರಿತಂ ಯಾತಿ ಯೌವನಮ್ ।
ಯಾತಿ ಪ್ರಖ್ಯಾತಿ ಸ್ತ್ವರಿತಂ ತಸ್ಮಾತ್ಪೂಜಯ ಶಂಕರಮ್ ॥"

ಇದನರಿದು ಬೇಗ ಬೇಗ ಲಿಂಗವ ಪೂಜಿಸಿರೋ !
ಬೇಗ ಬೇಗ ಜಂಗಮವನೊಲಿಸಿರೋ !
ಅರುವು[1]ಳ್ಳ ಕಾಲಕ್ಕೆ ಬೇಗ ಬೇಗ
ನಮ್ಮ ಅಖಂಡೇಶ್ವರಲಿಂಗವ [2]ಕೂಡಿ[2]ರೋ ! ೨೨

ಮುನ್ನ ಪಡೆಯದೆ ಇನ್ನು ಬೇಡಿದರೆ ಬರ್ಪುದೆ
ಎಂದು ನುಡಿಯುತಿರ್ಪರೆಲ್ಲ.
ಮುನ್ನ ಶ್ರೀಗುರುಲಿಂಗಜಂಗಮವ [3]ಮರೆತ[3] ಕಾರಣ
ಇನ್ನು ಕೆಟ್ಟರಲ್ಲ ನಮ್ಮ ಅಖಂಡೇಶ್ವರ ಲಿಂಗವನರಿಯದೆ ! ೨೩

ಹಿಂದೆ ಗುರುಭಕ್ತಿ ಲಿಂಗಪೂಜೆ ಜಂಗಮದಾಸೋಹವನರಿಯದ ಕಾರಣ
ಮುಂದೆ [4]ಹುಟ್ಟುಗುರುಡನಾಗಿ[4] ಕುಂಟನಾಗಿ ಕುಬ್ಜನಾಗಿ ನಪುಂಸಕನಾಗಿ
ದರಿದ್ರನಾಗಿ ಕುಲಹೀನನಾಗಿ ದೇಶಗೇಡಿಯಾಗಿ
ಬಹುರೋಗಿಯಾಗಿ ಮಹಾ ದುಃಖಮಂಬಡುತಿರ್ಪರು ನೋಡಾ,
ಅಖಂಡೇಶ್ವರಾ. ನಿಮ್ಮನರಿಯದ ಮನುಜರು ! ೨೪

---

೧. ಹು (ಅ) ೨. ನೆನೆ (ಕ) ೩. ಮರ್ತ (ಅ, ಬ, ಕ)
೪. ಹುಟ್ಟುವ ಕುರುಡ (ಅ, ಬ), ಹುಟ್ಟುವನು ಕುರುಡನಾಗಿ (ಕ),
ಹುಟ್ಟುವನು ಕುರುಡ (ಡ)

ಹಿಂದಣ ಜನ್ಮ[1]ದಲ್ಲಿ ಗುರುಲಿಂಗಜಂಗಮವ
ಶಿವನೆಂದರಿದು ನಂಬಿ ಪೂಜಿಸಿದ ಕಾರಣ
ಮುಂದೆ ಹುಟ್ಟುವನು, ಸತ್ಕುಲಜ ಬಲವಂತನಾಗಿ
ಧನಧಾನ್ಯ ಸಕಲ ಭೋಗೈಶ್ವರ್ಯ ಉಳ್ಳವನಾಗಿ
[2]ಸಕಲ ಲೋಕಕ್ಕೆ ಮನ್ನಣೆ ಉಳ್ಳವನಾಗಿ[2]
ವಿದ್ಯೆಬುದ್ಧಿಯಲ್ಲಿ ವಿಶೇಷನಾಗಿ
ಸತ್ಯ ಸದಾಚಾರ ಭಕ್ತಿಜ್ಞಾನ ಉಳ್ಳವನಾಗಿ
ನಮ್ಮ ಅಖಂಡೇಶ್ವರನ
ಪೂರ್ಣ ಒಲುಮೆ ಉಳ್ಳವನಾಗಿರ್ಪನು ನೋಡಿರೋ ! ೨೫

ನುಡಿಯಲ್ಲಿ ಕರ್ಕಶವಿಲ್ಲದೆ ನಡೆಯಲ್ಲಿ [3]ಬೀಸರವಾಗದೆ[3]
ಹಿಡಿದ ಭಕ್ತಿಯ ಕಡೆತನಕ ಬಿಡದೆ
ಬಡತನ ಎಡರು ಕಂಟಕ ಬಂದಲ್ಲಿ
ಚಿಂತೆಯಿಂದೆ ಕಾಂತಿಗುಂದದೆ
ಅಡಿಗಡಿಗೆ ಶಿವನೆಂಬ ನುಡಿಯ ಮರೆಯದೆ
ಇರ್ಪ ಸದ್ಭಕ್ತಂಗೆ ಬೇಡಿದ ಪದವ ಕೊಡುವ ನಮ್ಮ ಅಖಂಡೇಶ್ವರ ! ೨೬

ಎನ್ನ ತನು ಎನ್ನ ಧನ ಎನ್ನ ಮನೆ
ಎನ್ನ ಸತಿ ಸುತರೆ[4]ಂಬ ಮನಕ್ಕೆ
ಈಶ್ವರ[4] ಭಕ್ತಿ ಭಿನ್ನವಾಯಿತ್ತು ನೋಡಾ !
ತನ್ನ ಮರೆದು ಇದಿರನರಿದು
ಒಡವೆಯಾತಂಗೆ ಒಡವೆಯ [5]ಒಪ್ಪಿಸಿದೆಯಾದರೆ[5]
ಕೂಡಿಕೊಂಡಿರ್ಪನು ನೋಡಾ, ನಮ್ಮ ಅಖಂಡೇಶ್ವರನು ! ೨೭

---

೧. ಲ್ಮ (ಅ) ೨. ಸರ್ವಲೋಕ ಮನ್ನಣೆಯುಳ್ಳವನಾಗಿ (ಅ), ಸರ್ವಲೋಕ ಮನ್ನಣೆಯಾಗಿ (ಕ) ೩. ಬೀಸರ ಹೋಗದೆ (ಅ), ಬಿರಸು ಹೋಗದೆ (ಕ), ಬೇಸರ ಹೋಗದೆ (ಡ) ೪. ರೆಂಬುವನ್ನಕ್ಕರ (ಅ,ಕ,ಡ) ೫. ಒಪ್ಪಿಸಿದರೆ (ಅ, ಬ, ಕ, ಡ)

ಇದಿರಿನಲ್ಲಿ ಜಂಗಮವು ಬರುವುದ ಕಂಡು
ಸದರನಿಳಿದು ನಡೆದು ಹೋಗಿ
ಚರಣಕ್ಕೆರಗುವುದೆ ಉತ್ತ[೧]ಮ ಭಕ್ತಿ ಎನಿಸಿತ್ತು.
ಇದ್ದ ಸ್ಥಾನದಲ್ಲಿಯೇ ಎದ್ದು ನಿಲ್ಲುವುದೆ
ಮಧ್ಯಮ ಭಕ್ತಿ ಎನಿಸಿತ್ತು.
[೨]ಕುಳಿತಲ್ಲಿಯೇ ಕರ ಮುಗಿಯುವುದೆ[೨]
ಕನಿಷ್ಠ ಭಕ್ತಿಯೆನಿಸಿತ್ತು.
ಈ ಮೂರು ತೆರದ ಭಕ್ತಿಯಿಲ್ಲದೆ
ಗರ್ವದಿಂದ ಬೆರತುಕೊಂಡು ಕುಳಿತರೆ
ಮುಂಬೆ ಹಿರಿಯ ಶೂಲದ ಮೇಲೆ ಕುಳ್ಳಿರಿಸುವನು ನೋಡಾ,
ನಮ್ಮ ಅಖಂಡೇಶ್ವರ ! ೨೮

ಸರ್ವಲೋಕೋಪಕಾರವಾಗಿ [೩]ಶಿವನೇ[೩] ಜಂಗಮವಾಗಿ
ಬಂದನೆಂದರಿಯದವನ ಮುಖವ ನೋಡಲಾಗದು.
ಸರ್ವಲೋಕ ಪಾವನ ಮಾಡಲೋಸುಗ ಶಿವನೇ ಜಂಗಮವಾಗಿ
ಬಂದನೆಂದು ನಂಬದವನ ಅಂಗಳವ ಮೆಟ್ಟಲಾಗದು.
ಅದೆಂತೆಂದೊಡೆ :

"ಸರ್ವಲೋಕೋಪಕಾರಾಯ ಯೋ ದೇವಃ ಪರಮೇಶ್ವರಃ ।
[೪]ಚರತ್ಯತಿಥಿ[೪]ರೂಪೇಣ ನಮಸ್ತೇ ಜಂಗಮಾತ್ಮನೇ ॥"

ಎಂದುದಾಗಿ
ಇಂತಪ್ಪ ಜಂಗಮದ ಘನವನರಿಯದ
ಭಂಗಗೇಡಿಗಳ ಭಕ್ತರೆಂದಡೆ
ಭವ ಹಿಂಗದಯ್ಯ ಅಖಂಡೇಶ್ವರಾ. ೨೯

---

೧. ತ್ತು (ಅ, ಬ)
೨. ಕುಳಿತಲ್ಲಿದ್ದು ಕರವ ಮುಗಿದರೆ (ಕ), ಕುಳಿತಲ್ಲಿ ಕರವ ಮುಗಿಯುವುದೆ (ಅ, ಬ)
೩. ಸದಾಶಿವನೇ (ಡ)
೪. ಚರಾತಿಷ್ಠಂತಿ (ಅ, ಕ, ಡ)

ಮನೆಗೆ ಬಂದ ಜಂಗಮವ ಕಂಡು
ಮನದಲ್ಲಿ ಉದಾಸೀನವ ತಾಳಿ
ಮೋರೆಯನಡ್ಡನಿಕ್ಕಿದರೆ
[1]ಜಾರಿಹೋಯಿತ್ತು[1] ನೋಡಾ, ಹಿಂದೆ ಮಾಡಿದ ಭಕ್ತಿ.
ಪಂಙ್ತಿಯಲ್ಲಿ ಕಾಳಿತ ಜಂಗಮಕ್ಕೆ
ಒಂದ ನೀಡಿ ತಾನೊಂದನುಂಡರೆ
ಹುಳು[2]ಗೊಂಡ[2]ದಲ್ಲಿಕ್ಕುವ ನೋಡಾ,
ನಮ್ಮ ಅಖಂಡೇಶ್ವರ ! ೩೦

ಸದ್ಭಕ್ತನ ಸಹಜ ಸ್ವಭಾವದ ನಡೆ ಹೇಗಿರಬೇಕೆಂದಡೆ :
ಮನೆಗೆ ಬಂದ ಜಂಗಮವ ಕಂಡು
ಮನದಲ್ಲಿ ಸಂತೋಷವ ತಾಳಬೇಕು.
ಮದುವೆ ಮಾಂಗಲ್ಯ ಒಸಗೆ ಉತ್ಸಾಹದಂತೆ
ಹರ್ಷಾಬ್ಧಿ ತುಂಬಿ ತುಳುಕಿ ಹೊರಸೂಸಬೇಕು.
ಇಂದು ಎಮ್ಮ ಮನೆಗೆ ಮಹಾಪುಣ್ಯದ ಫಲವು ಬಂದು
ತುಂಬಿತೆಂದು ಕುಣಿಕುಣಿದು ನೋಡಿ ಹಾಡಿ ಹರಸಬೇಕು.
ಸತಿಸುತರು ಸಹವಾಗಿ ಒಡಗೂಡಿ, ಭಕ್ತಿಯ ಮಾಡಿ
ನಮ್ಮ ಅಖಂಡೇಶ್ವರ ಲಿಂಗವನೊಲಿಸಬೇಕು. ೩೧

ಕೋಳಿ ಕೂಗುವುದು ಬೆಳಗಿನ ವೇಳೆಯನರಿದು;
ಕತ್ತೆ ಕೂಗುವುದು ತನ್ನ ಹೊತ್ತಿನ ಗೊತ್ತನರಿದು;
ಶಿವಭಕ್ತನಾದ ಬಳಿಕ, ತನ್ನ ಅರುಹು ಕುರುಹಿನ,
ಭಕ್ತಿ ಮುಕ್ತಿಯ ಗೊತ್ತನರಿಯದ ಬಳಿಕ
ಆ ಕೋಳಿಕತ್ತೆಗಳಿಂದ ಕರಕಷ್ಟ ನೋಡಾ !
ಅಖಂಡೇಶ್ವರಾ ೩೨

---

೧. ಜಾರಿತ್ತು (ಅ, ಬ, ಕ, ಡ) ೨. ಗುಂಡ (ಅ)

ಲಿಂಗಜಂಗಮಕ್ಕೆ ಮಾಡಿದ ಭಕ್ತಿ
ಮನಕ್ಕೆ ಮನವೇ ಸಾಕ್ಷಿಯಾಗಿರಬೇಕಲ್ಲದೆ
ಇದಿ[1]ರಿಟ್ಟು ನುಡಿಯಲಾಗದು.
ಅದೇನು ಕಾರಣವೆಂದರೆ :
ಬಡವಂಗೆ ಭಾಗ್ಯ ದೊರೆಕೊಂಡಂತಿರಬೇಕಲ್ಲದೆ
ಎನ್ನ ಪದಾರ್ಥವ ನಾನು ಮಾಡಿದೆನು ಅವರು ಕೈಕೊಂಡರೆಂದು
ತನ್ನ ಖ್ಯಾತಿ ಭಕ್ತಿಯನು
ಮನ ಹಿಗ್ಗಿ ಅನ್ಯರೊಡನೆ ಹೇಳಿಕೊಂಡರೆ
ಶಿವನೊಪ್ಪಿಕೊಳ್ಳನು; ಪುರಾತನರು ಮೆಚ್ಚರು.
ಅಂತಪ್ಪ ಖ್ಯಾತಿಭಕ್ತನ ಡಂಭಕದ ಭಕ್ತಿಯೆಂತಾಯಿತ್ತೆಂದರೆ :
ಹಾವಸೆಗಲ್ಲ ಮೆಟ್ಟಿ ಜಾರಿ ಬಿದ್ದು
ಕೊಡನೊಡೆದಂತಾಯಿತ್ತು ಕಾಣಾ!

ಅಖಂಡೇಶ್ವರಾ ೩೩

ಧರ್ಮಾರ್ಥವಾಗಿ ದೀಕ್ಷೆಯ ಮಾಡಬೇಕಲ್ಲದೆ
[2]ಆಶಾರ್ಥವಾಗಿ[2] ದೀಕ್ಷೆಯ ಮಾಡಲಾಗದಯ್ಯ.
ಜ್ಞಾನಾರ್ಥವಾಗಿ ಶಾಸ್ತ್ರವನೋದಬೇಕಲ್ಲದೆ
ವಾದಾರ್ಥವಾಗಿ ಶಾಸ್ತ್ರವನೋದಲಾಗದಯ್ಯ.
ಮೋಕ್ಷಾರ್ಥವಾಗಿ ಶಿವಪೂಜೆಯ ಮಾಡಬೇಕಲ್ಲದೆ
ಡಂಬಾರ್ಥವಾಗಿ ಶಿವಪೂಜೆಯ ಮಾಡಲಾಗದಯ್ಯ.
ಅದೆಂತೆಂದೊಡೆ :

"ಆಶಾರ್ಥಂ ದೀಯತೇ ದೀಕ್ಷಾ ದಂಬಾರ್ಥಂ ಪೂಜ್ಯತೇ ಶಿವಃ ।
ವಾದಾರ್ಥಂ ಪಠ್ಯತೇ ವಿದ್ಯಾ ಮೋಕ್ಷೋ ನಾಸ್ತಿ ವರಾನನೇ ।
ಧರ್ಮಾರ್ಥಂ ದೀಯತೇ ದೀಕ್ಷಾ ಮೋಕ್ಷಾರ್ಥಂ ಪೂಜ್ಯತೇ ಶಿವಃ ।
ಜ್ಞಾನಾರ್ಥಂ ಪಠ್ಯತೇ ವಿದ್ಯಾ ಮೋಕ್ಷಸಿದ್ಧಿರ್ವರಾನನೇ ॥"

ಎಂದುದಾಗಿ

---

೧. ದ (ಅ, ಬ, ಕ) ೨. ಅರ್ಥಕ್ಕಾಗಿ (ಅ, ಕ)

ಇಂತಪ್ಪ ಖ್ಯಾತಿ ಕೀರ್ತಿಯ, ಕಡೆಗೆ ನೂಂಕಿ
ನೀತಿಯ ನಿಜವನು ಅಂಗೀಕರಿಸಿ
ಶಿವನೊಲಿಸುವ ಭಾವವನರಿಯದೆ
ಸಂತೆಯ ಪಸಾರದಂತೆ
ಸರ್ವರು ಮೆಚ್ಚಲೆಂದು [೧]ಹಾರೈಸಿ
ಹರಹಿಕೊಂಡು[೧] ಮಾಡುವ ಡಂಭಕನ ಪೂಜೆ
ಶಂಭುವಿಂಗೆ ಮುಟ್ಟಲರಿಯದು ನೋಡಾ !

ಅಖಂಡೇಶ್ವರಾ ೩೪

ಲಿಂಗಾರ್ಚನೆಯು ಮಾಡಿದ ಬಳಿಕ
ಜಂಗಮಾರ್ಚನೆಯ [೨]ಮಾಡಲೇ[೨]ಬೇಕು.
ಜಂಗಮದ ಪಾದೋದಕ ಪ್ರಸಾದವ ಕೊಳ್ಳಲೇಬೇಕು.
ನಿಚ್ಚ ನಿಚ್ಚ ಲಿಂಗಾರ್ಚನೆಯ ಮಾಡಿ
ನಿಚ್ಚ ನಿಚ್ಚ ಜಂಗಮದರ್ಚನೆ ಪಾದೋದಕ ಪ್ರಸಾದವಿಲ್ಲದ ಬಳಿಕ
ಆ ಲಿಂಗಾರ್ಚನೆ ಎಂತಾಯಿತ್ತೆಂದಡೆ :
ಮೂಗ ಕೊಯ್ದ [೩]ಮೋರೆಯಂತೆ[೩] ನೋಡಾ !

ಅಖಂಡೇಶ್ವರಾ ೩೫

ಒಳಗೆ ಲಿಂಗದ ಕೂಟದಲ್ಲಿ ಮನ[೪]ವಡಗಿ[೪]ರಬೇಕು.
ಹೊರಗೆ ಜಂಗಮದ ಮಾಟದಲ್ಲಿ ತನು[೫]ವಿಡಿದಿ[೫]ರಬೇಕು.
ಈ ಉಭಯವ ಒಂದರೊಳಗೊಂದು ವೇಧಿಸಿಕೊಂಡು
[೬]ತಾನಳಿ[೬]ದು ಮಾಡುವ ಭಕ್ತನ ಕೂಡಿಕೊಂಡಿರ್ಪನು [೭]ನೋಡಾ[೭] !

ಅಖಂಡೇಶ್ವರಾ ೩೬

---

೧. ಪಸರಿಸಿ ಹಾರೈಸಿಕೊಂಡ (ಬ, ಕ), ಹಸರಿಸಿ ಹರಹಿಕೊಂಡು (ಅ)
೨. ಮಾಡ (ಅ, ಕ, ಡ) ೩. ಮುಖದಂತೆ (ಬ), ಮೂಕಾರ್ತಿಯಂತೆ (ಡ)
೪. ವಡಗೂಡಿ (ಅ), ವನಡಗಿ (ಬ) ೫. ವಡಗಿ (ಕ) ೬. ತನುವಳಿ (ಕ)
೭. ನೋಡಾ ನಮ್ಮ (ಬ, ಡ) ನಮ್ಮ (ಅ, ಕ)

[೧]ಆದಿಯಲ್ಲಿಯು[೧] ನೀನೇ[೨] ದೇವನು ನಾನೇ[೨] ಭಕ್ತನಯ್ಯ;
[೩]ಅನಾದಿಯಲ್ಲಿಯು[೩] ನೀನೇ ದೇವನು ನಾನೇ ಭಕ್ತನಯ್ಯ;
ಆದಿಯನಾದಿಯಿಂದತ್ತಲು ನೀನೇ ದೇವನು ನಾನೇ ಭಕ್ತ[೪]ನಾಗಿ[೪]
ನಿಮ್ಮೊಳಗೆ ಅಡಗಿರ್ದೆನಯ್ಯ.

ಅಖಂಡೇಶ್ವರಾ ೩೭

ನಿಮ್ಮ ತೊತ್ತಿನ ತೊತ್ತು ಪಡಿದೊತ್ತೆಂದು
ಎನ್ನ ಕೈವಿಡಿದು ತಲೆದಡಹಿ
ವರದಾಭಯಹಸ್ತವ ಕೊಟ್ಟು
ಮರ್ತ್ಯಲೋಕಕ್ಕೆ ಎನ್ನ ಕಳುಹಿದಿರಾಗಿ
ನೀನೇ ಕರ್ತನು ನಾನೇ ಭೃತ್ಯನು;
ನೀನೇ ಒಡೆಯನು ನಾನೇ ಬಂಟನು;
ನೀನೇ ಆಳ್ದನು ನಾನೇ [೫]ಆಳು[೫].
ನೀನೇ ದೇವನು ನಾನೇ ಭಕ್ತನಾಗಿ
ನೀನು ಮಾಡೆಂದ ಮಣಿಹವ ಮಾಡುತಿರ್ಪೆನು;
ನೀನು ಬೇಡೆಂದ ಮಣಿಹವ ಬಿಡುತಿರ್ಪೆನು;
ನೀನು[೬] ಹೇಳಿದ ತೊತ್ತು [೭]ಸೇವೆಯ[೭] ಮಾಡುತಿಪ್ಪೆನಯ್ಯ.

ಅಖಂಡೇಶ್ವರಾ ೩೮

ಕಾಮವುಳ್ಳವಂಗೆ ಲಿಂಗದ ಪ್ರೇಮವಿನ್ನೆಲ್ಲಿಯದೊ ?
ಕ್ರೋಧವುಳ್ಳವಂಗೆ ಜಂಗಮದ ಪ್ರೇಮವಿನ್ನೆಲ್ಲಿಯದೊ ?
ಮದಮತ್ಸರವುಳ್ಳವಂಗೆ ಪ್ರಸಾದ ಪ್ರೇಮವಿನ್ನೆಲ್ಲಿಯದೊ ?
ಇಂತೀ ಗುಣ[೮]ವರತಲ್ಲದೆ[೮] ಸಹಜ [೯]ಭಕ್ತಿ[೯] ನೆಲೆಗೊಳ್ಳದಯ್ಯ.

ಅಖಂಡೇಶ್ವರಾ ೩೯

---

೧. ಆದಿಯಲ್ಲಿ (ಅ,ಕ,ಡ) ೨. ನೇ (ಅ,ಬ,ಕ,ಡ) ೩. ಅನಾದಿಯಲ್ಲಿ(ಅ,ಕ,ಡ) ೪. ನಯ್ಯಾ (ಬ) ೫. ಆಳುಸೇವಕನು (ಅ,ಬ), ಸೇವಕನು (ಕ), ಆಳಿಸಿಕೊಳ್ಳುವವನು (ಡ) ೬. ವು (ಅ, ಕ, ಡ) ೭. ಶಾನೆ (ಅ) ೮. ವಂತರಲ್ಲದೆ (ಬ, ಕ) ೯. ಸದ್ಭಕ್ತಿ (ಅ)

ಲಿಂಗಪ್ರೇಮವುಳ್ಳವಂಗೆ ಭವಬಂಧನವಿಲ್ಲ.
ಜಂಗಮಪ್ರೇಮವುಳ್ಳವಂಗೆ ಸಂಸಾರದ ತೊಡಕಿಲ್ಲ.
ಪ್ರಸಾದಪ್ರೇಮವುಳ್ಳವಂಗೆ ಇಹಪರದ ಎಡೆಯಾಟವಿಲ್ಲ.
ತಾನಿಲ್ಲದೆ ಮಾಡುವ ಭಕ್ತಂಗೆ
ಆವಾವ ಫಲಪದದ ಹಂಗಿಲ್ಲವಯ್ಯ.

ಅಖಂಡೇಶ್ವರಾ ೪೦

ಲಿಂಗಪ್ರೇಮಿಗಳನಂತರುಂಟು ಜಗದೊಳಗೆ;
ಜಂಗಮಪ್ರೇಮಿಗ[೧]ಳಾರನೂ[೧] ಕಾಣೆನ[೨]ಯ್ಯ !
ಲಿಂಗಪೂಜಕರನಂತರುಂಟು ಜಗದೊಳಗೆ ;
ಜಂಗಮಪೂಜಕರಾರನೂ ಕಾಣೆನಯ್ಯ !
ಲಿಂಗಪ್ರಾಣಿಗಳನಂತರುಂಟು ಜಗದೊಳಗೆ;
ಜಂಗಮಪ್ರಾಣಿಗಳಾರನೂ ಕಾಣೆನಯ್ಯ !
ಲಿಂಗದ ಬಾಯಿ ಜಂಗಮವೆಂದರಿದು
ಮಾಡಿ ಮನವಳಿದು [೩]ಘನವಾದ[೩] ಸಂಗನಬಸವಣ್ಣನ
ಶ್ರೀಪಾದಕ್ಕೆ ನಮೋ [೪]ನಮಃ[೪] ಎಂಬೆನಯ್ಯ.

ಅಖಂಡೇಶ್ವರಾ ೪೧

ಲಿಂಗಾರ್ಚನೆ[೫]ಯಿಂದ ಜಂಗಮಾರ್ಚನೆಯಧಿಕ[೫] ನೋಡಾ.
ಅದೆಂತೆಂದೊಡೆ :
ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ
ತಾರಜ ತಂಡಜ ರೋಮಜರಿಗೆ ಪ್ರಳ[೬]ಯವಾಯಿತ್ತು.
ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ
ನವಕೋಟಿಬ್ರಹ್ಮರಿಗೆ ಪ್ರಳ[೬]ಯವಾಯಿತ್ತು.

---

೧. ಳನಾರನೂ    ೨. ವ (ಅ)    ೩. ಘನಲಿಂಗವಾದ (ಅ, ಬ, ಕ, ಡ)
೪. ನಮೋ (ಅ, ಬ, ಕ, ಡ)    ೫. ಗಿಂದಧಿಕಜಂಗಮಾರ್ಚನೆ (ಕ)
೬. ಳೆ (ಅ, ಬ, ಕ)

ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ
[೧]ಶತ[೧]ಕೋಟಿ ನಾರಾಯಣರಿಗೆ ಪ್ರಳ[೨]ಯವಾ[೨]ಯಿತ್ತು.
ಆದಿಯಲ್ಲಿ ಲಿಂಗಾರ್ಚನೆಯ ಮಾಡಿದ
ಅನಂತಕೋಟಿ ರುದ್ರರಿಗೆ ಪ್ರಳಯವಾಯಿತ್ತು.
ಇದುಕಾರಣ ಲಿಂಗಾರ್ಚನೆ ಪ್ರಳಯಕ್ಕೊಳಗು,
ಜಂಗಮಾರ್ಚನೆ ಪ್ರಳಯಾತೀತವೆಂದರಿದು
ಜಂಗಮವೇ ಪ್ರಾಣವೆಂದು ನಂಬಿ
ಅನಂತಕೋಟಿ [೩]ಪ್ರಳಯಂಗಳ[೩] ಮೀರಿ
ಪರಬ್ರಹ್ಮವನೊಡಗೂಡಿದ ಸಂಗನಬಸವಣ್ಣನ
ಶ್ರೀಪಾದಕ್ಕೆ ನಮೋ [೪]ನಮಃ ಎಂಬೆನಯ್ಯಾ[೪].
ಅಖಂಡೇಶ್ವರಾ ೪೨

ಜಂಗಮವ ಕಂಡು ವಂದನೆಯ ಮಾಡಿದರೆ
ಮುಂದೆ ಭಕ್ತಿ[೫]ಮುಕ್ತಿ[೫] ಪುಣ್ಯದ ಫಲವು ದೊರೆಕೊಂಬುದು ನೋಡಾ.
ಜಂಗಮವ ಕಂಡು ನಿಂದೆಯ ಮಾಡಿದರೆ
ಮುಂದೆ ಬಂಧನಕ್ಕೊಳಗಪ್ಪುದು ತಪ್ಪದು ನೋಡಾ.
ಅಖಂಡೇಶ್ವರಾ ೪೩

ಜಂಗಮವೇ ಜಗದೀಶನೆಂದು ನಂಬದವನ ಜನ್ಮವ ಸುಡು ಸುಡು !
ಜಂಗಮವೇ [೬]ಜಗ[೬]ಭರಿತನೆಂದು ನಂಬದವನ ಜನ್ಮ ವ್ಯರ್ಥ ಜನ್ಮ !
ಜಂಗಮವೇ ಶಿವನೆಂದು ನಂಬದವನ ಮನೆ ಸುಡುಗಾಡು ನೋಡಾ.
ಅಖಂಡೇಶ್ವರಾ ೪೪

---

೧. ದಶ (ಅ, ಕ) ೨. ಳೆ (ಅ, ಬ, ಕ)
೩. ಪ್ರಳಯವ (ಅ) ೪. ನಮೋ ಎಂದು ಬದುಕಿದೆನಯ್ಯಾ
೫. ಮುಕ್ತಯ (ಬ, ಇ) ೬. ಜಗದ್ (ಇ, ಅ)

ಸಂಗನಬಸವಣ್ಣನಂತೆ ಸದ್ಭಕ್ತ[1]ನೆಂದೆನಿ[1]ಸಯ್ಯ ಎನ್ನ.
ಮಡಿವಾಳಮಾಚಯ್ಯಗಳಂತೆ ವೀರಮಾಹೇಶ್ವರನೆಂದೆನಿಸಯ್ಯ ಎನ್ನ.
ಚೆನ್ನಬಸವಣ್ಣನಂತೆ ಪರಮ ಪ್ರಸಾದಿ[2]ಯೆಂದೆನಿ[2]ಸಯ್ಯ ಎನ್ನ.
ಸಿದ್ಧರಾಮನಂತೆ ಶುದ್ಧಪ್ರಾಣಲಿಂಗಿ[3]ಯೆಂದೆನಿ[3]ಸಯ್ಯ ಎನ್ನ.
ಉರಿಲಿಂಗಪೆದ್ದಯ್ಯಗಳಂತೆ [4]ಉರುತರದ[4] ಶರಣನೆಂದೆನಿಸಯ್ಯ ಎನ್ನ.
ಅಜಗಣ್ಣತಂದೆಗಳಂತೆ ನಿಜಲಿಂಗೈಕ್ಯನೆಂದೆನಿಸಯ್ಯ ಎನ್ನ.
ನಿಜಗುಣಯೋಗಿಗಳಂತೆ ಪರಮ ಆರೂಢನೆಂದೆನಿಸಯ್ಯ ಎನ್ನ.
ಅಕ್ಕಮಹಾದೇವಿಯಂತೆ ನಿಷ್ಕಾಮಿಯೆಂದೆನಿಸಯ್ಯ ಎನ್ನ.
ಪ್ರಭುದೇವರಂತೆ ಪರಿಪೂರ್ಣನೆಂದೆನಿಸಯ್ಯ ಎನ್ನ.
ಇಂತಿವರ ಕಾರುಣ್ಯದ ನಿಲವನೇ ಕರುಣಿಸಿ
ನಿಮ್ಮ ಗಣಂಗಳ ಸಮ್ಮೇಳನದಲ್ಲಿ[5]ರಿಸಯ್ಯ[5] ಎನ್ನ.

ಅಖಂಡೇಶ್ವರಾ ೪೫

ಸ್ವರ್ಗಕ್ಕೆ ಏಳು ಸೋಪಾನವಿರ್ಪುದನು ಆರೂ ಅರಿಯರಲ್ಲ !
ಅದು ಹೇಗೆಂದೊಡೆ :
ಜಂಗಮವ ಕಾಣುತ್ತ ಸದ್ಭಕ್ತನು [6]ಕುಳಿತಾಸನವ[6] ಬಿಟ್ಟು
ಇದಿರೆದ್ದು ನಡೆವುದೇ ಒಂದನೆಯ ಸೋಪಾನ.
ಮನ ಕರಗಿ ತನು ಉಬ್ಬಿ ಕಂಗಳಲ್ಲಿ ಪರಿಣಾಮಜಲವುಕ್ಕಿ
ಅವರ ಚರಣಕಮಲದ ಮೇಲೆ ಸುರಿವಂತೆ
ಸಾಷ್ಟಾಂಗದಿಂದೆ ನಮಸ್ಕರಿಸುವುದೇ ಎರಡನೆಯ ಸೋಪಾನ.
ಆ ಜಂಗಮವ ತನ್ನ ಮಠಕ್ಕೆ ಬಿಜಯಂಗೈಸಿ
ಉನ್ನತಾಸನದ ಗದ್ದುಗೆಯ ಮೇಲೆ ಕುಳ್ಳಿರಿಸಿ
ಪಾದ ಪ್ರಕ್ಷಾಲನವ ಮಾಡುವುದೇ ಮೂರನೆಯ ಸೋಪಾನ.

---

೧. ನೆನಿ (ಅ, ಕ) ೨. ಯೆನಿ (ಅ, ಕ) ೩. ಯೆನಿ (ಅ, ಕ)
೪. ಉರುತರ (ಬ, ಇ) ೫. ರಿಸಿಸಲಹಯ್ಯ (ಅ, ಕ)
೬. ಕುಳಿತಠಾವು (ಅ), ಕುಳಿತಸ್ಥಲವ (ಕ)

ಆ ಜಂಗಮದೇವರ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂದರ್ಚಿಸಿ
ಪಾದತೀರ್ಥವ ಕೊಂಬುವುದೇ ನಾಲ್ಕನೆಯ ಸೋಪಾನ.
ಆ ಜಂಗಮಕ್ಕೆ ಮೃಷ್ಟಾನ್ನ ಪಾನಂಗಳಿಂದೆ
ತೃಪ್ತಿವಡಿಸುವುದೇ ಐದನೆಯ ಸೋಪಾನ.
ಆ ಜಂಗಮದ ಒಕ್ಕುಮಿಕ್ಕ ಪ್ರಸಾದವ ಕೊಂಬುವುದೇ
ಆರನೆಯ ಸೋಪಾನ.
ಆ ಜಂಗಮದಲ್ಲಿ ಅನುಭಾವವ ಬೆಸಗೊಂಬುವುದೇ
ಏಳನೆಯ ಸೋಪಾನ.
ಇಂತೀ ಸಪ್ತಸೋಪಾನಂಗಳ ಬಲ್ಲ ಸದ್ಭಕ್ತಂಗೆ
ಕೈಲಾಸ ಕರತಳಾಮಳಕವಲ್ಲದೆ
ತನುವ ಸವಿಸದೆ ಮನವ ದಂಡಿಸದೆ ಧನವ ಸಮರ್ಪಿಸದೆ
ಮಿಥ್ಯಾ ಸಂಸಾರದಲ್ಲಿ ಸಿಲ್ಕಿ ಹೊತ್ತುಗಳೆದು
[೧]ಹೊಡೆ[೧]ದಾಡಿ ಸತ್ತು ಹೋಗುವ
ವ್ಯರ್ಥ[೨]ಜೀವಿಗಳಿಗೆ ಇನ್ನೆ[೨]ತ್ತಣ ಕೈಲಾಸವಯ್ಯ.

ಅಖಂಡೇಶ್ವರಾ ೪೬

ಲಿಂಗಪೂಜಕನಾದಡೆ[೩] ಜಂಗಮವನರ್ಚಿಸಬೇಕು.
ಲಿಂಗನಿಷ್ಠಾಪರನಾದಡೆ[೩] ಜಂಗಮದಲ್ಲಿ ವಿಶ್ವಾಸವನಿಡಬೇಕು.
ಲಿಂಗವ ಪೂಜಿಸಿ ಜಂಗಮವ ಮರೆತಡೆ[೩]
ಶಿರವಿ[೪]ಲ್ಲದ ದೇಹದಂತೆ ಕಾಣಾ.

ಅಖಂಡೇಶ್ವರಾ ೪೭

ಭಕ್ತಿಯ ಸ್ಥಳಕುಳವನರಿಯದೆ ಬರಿದೆ ಭಕ್ತರೆನಿಸಿಕೊಂಬ
ಮುಕ್ತಿಗೇಡಿಗಳನೇನೆಂಬೆನಯ್ಯ !

---

೧. ಹೊಡೆ ಹೊಡೆ ೨. ಜೀವರಿಂಗೆ (ಬ), ಜೀವಿಂಗೆ (ಡ)
೩. ರೆ (ಬ, ಕ, ಅ) ೪. ಸಿ (ಅ, ಕ)

ಅನಾದಿಪರಶಿವನು ತನ್ನ ಲೀಲೆಯಿಂದೆ
ತಾನೇ ಗುರುಲಿಂಗಜಂಗಮವಾಗಿ ಬಂದನೆಂದರಿದು
ತನುಮನಧನವ ಸಮರ್ಪಿಸಿ ಘನಮುಕ್ತಿಯ ಪಡೆಯಲರಿಯದೆ
ಆಣವಮಲ ಮಾಯಾಮಲ ಕಾರ್ಮಿಕಮಲ[೧]ವೆಂಬ[೧]
ಮಲತ್ರಯಂಗಳನೆ ಭುಂಜಿಸಿ
ಸಂಸಾರವಿಷಯರಸವೆಂಬ [೨]ನೀರನೆ[೨] ಕುಡಿದು
ಮಾಯಾಮೋಹವೆಂಬ ಮದವು ತಲೆ[೩]ಗೇರಿ[೩]
ಸೊಕ್ಕಿದೆಕ್ಕಲನಂತೆ ತಿರುಗುವ ನರಕಜೀವಿಗಳ ಭಕ್ತರೆನಬಹುದೇ ?
ಅಖಂಡೇಶ್ವರಾ ೪೮

ತನುವ ಗುರುವಿಂಗೆ ಕೊಟ್ಟು ಗುರುಭಕ್ತನಾಗಬೇಕು.
ಮನವ ಲಿಂಗಕೆ ಕೊಟ್ಟು ಲಿಂಗಭಕ್ತನಾಗಬೇಕು.
ಧನವ ಜಂಗಮಕ್ಕೆ ಕೊಟ್ಟು ಜಂಗಮಭಕ್ತನಾಗಬೇಕು.
ಇಂತೀ ತ್ರಿವಿಧಭಕ್ತಿಯ ವರ್ಮವನರಿಯದವರ [೪]ಮಚ್ಚ[೪]
ನಮ್ಮ ಅಖಂಡೇಶ್ವರ. ೪೯

ಗುರುವಿನಲ್ಲಿ ಗುಣವ*ನರಸಿದಡೆ* ಒಂದನೆಯ ಪಾತಕ.
ಲಿಂಗದಲ್ಲಿ ಶಿಲೆಯ*ನರಸಿದಡೆ* ಎರಡನೆಯ ಪಾತಕ.
ಜಂಗಮದಲ್ಲಿ ಕುಲವ*ನರಸಿದಡೆ* ಮೂರನೆಯ ಪಾತಕ.
ಪಾದೋದಕದಲ್ಲಿ ಸೂತಕವ*ನರಸಿದಡೆ* ನಾಲ್ಕನೆಯ ಪಾತಕ.
ಪ್ರಸಾದದಲ್ಲಿ ರುಚಿಯ*ನರಸಿದಡೆ* ಐದನೆಯ ಪಾತಕ.
ಇಂತೀ ಪಂಚಮಹಾಪಾತಕರ [೫]ಎನಗೊಮ್ಮೆಯೂ[೫] ತೋರದಿರಯ್ಯ.
ಅಖಂಡೇಶ್ವರಾ ೫೦

ಗುರುವಿನಲ್ಲಿ ಭಕ್ತಿಯಿಲ್ಲ, ಲಿಂಗದಲ್ಲಿ ನಿ[೬]ಷ್ಠೆಯಿಲ್ಲ;
ಜಂಗಮದಲ್ಲಿ ವಿಶ್ವಾಸವಿಲ್ಲ, ಪಾದೋದಕಪ್ರಸಾದದಲ್ಲಿ ಪ್ರೇಮವಿಲ್ಲ;

---

೧. ಗಳೆಂಬ (ಕ) ೨. ನೀರ (ಅ,ಬ,ಕ) ೩. ಗಡರಿ (ಬ) ೪. ಮೆಚ್ಚ (ಅ), ಮಚ್ಚನಯ್ಯಾ (ಬ, ಕ) *. ನಾರಿಸಿದೊಡೆ (ಬ), ನಾರಿಸಿದಡೆ (ಕ)
೫. ಎನಗೊಮ್ಮೆ (ಅ, ಬ, ಕ, ಡ) ೬. ನೈ (ಅ, ಬ)

ಬರಿದೆ ಭಕ್ತರೆಂಬ ಭವಭಾರಿಗಳ ಮುಖವ ನೋಡಲಾಗದಯ್ಯ.
ಅಖಂಡೇಶ್ವರಾ ೫೧

ಭಕ್ತನಾಗಬೇಕು ಭವವ ಹರಿದು.
ಭಕ್ತನಾಗಬೇಕು ಸಕಲಪ್ರಪಂಚ[೧]ವ ಮರೆದು.
ಭಕ್ತನಾಗಬೇಕು [೨]ಆಶಾಪಾಶವ[೨] ಹರಿದು.
ಭಕ್ತನಾಗಬೇಕು ನಮ್ಮ ಅಖಂಡೇಶ್ವರನ ದಿವ್ಯ ಪಾದವ ನಂಬಿ. ೫೨

ಸಟೆಯನಾಡದಾತ ಭಕ್ತ.
ಕುಟಿಲ ಕುಹಕವ [೩]ಮರೆ[೩]ದಾತ ಭಕ್ತ.
ನಿಟಿಲಾಕ್ಷನ ಧ್ಯಾನದಲ್ಲಿ ಇದ್ದಾತ ಭಕ್ತ.
ನಮ್ಮ ಅಖಂಡೇಶ್ವರನ ಭಕ್ತಿಭಾವದಲ್ಲಿದ್ದಾತನೇ ಸದ್‌ಭಕ್ತ ನೋಡಾ. ೫೩

ಶಿವಭಕ್ತನೆನಿಸುವಾತಂಗೆ ಆವುದು ಚಿಹ್ನವೆಂದೊಡೆ :
ಸದಾಚಾರದಲ್ಲಿ ನಡೆವುದು; ಶಿವನಲ್ಲಿ ಭಕ್ತಿ[೪]ಯಿಂದಿ[೪]ರುವುದು;
[೫]ಲಿಂಗಜಂಗಮ ಒಂದೆ[೫]ಯೆಂದು [೬]ಕಾಂಬುದು.[೬]
ವಿಭೂತಿ ರುದ್ರಾಕ್ಷಿ ಲಿಂಗಧಾರಣ ಮುಂತಾದ
ಶಿವಲಾಂಛನವನುಳ್ಳ ಶಿವಶರಣರಲ್ಲಿ
ಅತಿ ಭಕ್ತಿಯಾಗಿರ್ಪಾತನೇ ಸದ್‌ಭಕ್ತ ನೋಡಾ.
ಅದೆಂತೆಂದೊಡೆ :

> "ಸದಾಚಾರಃ ಶಿವೇ ಭಕ್ತಿಃ ಲಿಂಗೇ ಜಂಗಮ ಏಕಧೀಃ ।
> ಲಾಂಛನೇ ಶರಣೇ ಭಕ್ತಿಃ ಭಕ್ತಸ್ಥಲಮನುತ್ತಮಮ್ ॥"

ಎಂದುದಾಗಿ
ಇಂತಪ್ಪ ಸಹಜ ಭಕ್ತರ ತೋರಿ ಬದುಕಿಸಯ್ಯ ಎನ್ನ.
ಅಖಂಡೇಶ್ವರಾ ೫೪

---

೧. ಚು (ಅ, ಕ) ೨. ಆಶಾಪಾಶವನೆಲ್ಲ (ಕ) ೩. ಮಾಡ (ಕ)
೪. ಯಾಗಿ (ಅ, ಬ, ಕ) ೫. ಗುರುಲಿಂಗಜಂಗಮುವನೊಂದೆ (ಇ)
೬. ಕಾಣ್ಬುದು (ಅ, ಬ, ಕ)

ಗುರುವಿಂಗೆ ತನುವ*ನರ್ಪಿಸಿ*ದಲ್ಲದೆ ತನುವಿನ ವಾಸನೆ ಹಱಿಯದು.
ಲಿಂಗಕ್ಕೆ ಮನವ*ನರ್ಪಿಸಿ*ದಲ್ಲದೆ ಮನದ ವಾಸನೆ ಹರಿಯದು.
ಜಂಗಮಕ್ಕೆ ಧನವ*ನರ್ಪಿಸಿ*ದಲ್ಲದೆ ಧನದ ವಾಸನೆ ಹರಿಯದು.
ಇದು ಕಾರಣ ತ್ರಿವಿಧಕ್ಕೆ ತ್ರಿವಿಧವ*ನರ್ಪಿಸಿ*
ತ್ರಿವಿಧ ವಾಸನೆಯ ಹರಿದು
ತ್ರಿವಿಧವು ಒಂದಾದ ಘನವನೊಡಗೂಡಬಲ್ಲಡೆ[೨] ಸದ್ಭಕ್ತನೆಂಬೆನಯ್ಯ.

ಅಖಂಡೇಶ್ವರಾ ೫೫

ಹರ ಹರಾ ಎನ್ನ ಬಡಮನದ ಅಳಿಯಾಸೆಯ ನೋಡಾ !
ಸುರಭಿಧೇನು[೩]ವಿದ್ದು ಬರಡಾಕಳಿಗೆ ಆಸೆಮಾಡುವಂತೆ
ಕಲ್ಪವೃಕ್ಷವಿದ್ದು ಕಾಡಮರಕ್ಕೆ ಕೈಯಾನುವಂತೆ
ಚಿಂತಾಮಣಿಯಿದ್ದು ಗಾಜಿನ [೪]ಮಣಿ[೪]ಯ ಬಯಸುವಂತೆ
ಎನ್ನ ಕರಮನಭಾವದಲ್ಲಿ ನೀವು ಭರಿತರಾಗಿರ್ದುದ ಮರೆತು
ನರರಿಗಾಸೆಯ ಮಾಡಿ ಕೆಟ್ಟೆನಯ್ಯ.

ಅಖಂಡೇಶ್ವರಾ ೫೬

ಶಿವ ಶಿವಾ ನೀವೆನ್ನ ನಡೆಯೊಳಗೆ ನಡೆರೂಪವಾಗಿರ್ದು
ನಡೆಪರುಷವ ಕರುಣಿಸಯ್ಯ ದೇವ.
ಎನ್ನ ನುಡಿಯೊಳಗೆ ನುಡಿರೂಪಾಗಿರ್ದು
ನುಡಿಪರುಷವ ಕರುಣಿಸಯ್ಯ ದೇವ.
ಎನ್ನ ನೋಟದೊಳಗೆ ನೋಟರೂಪಾಗಿರ್ದು
ನೋಟಪರುಷವ ಕರುಣಿಸಯ್ಯ ದೇವ.
ಎನ್ನ ಹಸ್ತದೊಳಗೆ ಹಸ್ತರೂಪಾಗಿರ್ದು
ಹಸ್ತ ಪರುಷವ ಕರುಣಿಸಯ್ಯ ದೇವ.

---

* ಸಮರ್ಪಿಸಿ (ಅ)   ೨. ರೆ (ಅ, ಕ)   ೩. ಪಶು (ಅ, ಕ)
೪. ಟಿಕ್ಕಿ (ಅ)

ಎನ್ನ ಮನದೊಳಗೆ ಮನರೂಪಾಗಿರ್ದು
ಮನಪರುಷವ ಕರುಣಿಸಯ್ಯ ದೇವ.
ಎನ್ನ ಭಾವದೊಳಗೆ ಭಾವರೂಪಾಗಿರ್ದು
ಭಾವಪರುಷವ ಕರುಣಿಸಯ್ಯ ದೇವ.

ಅಖಂಡೇಶ್ವರಾ ೫೭

ನೀನೊಲಿದಡೆ ಕಲ್ಲೆಲ್ಲ ಕನಕವಯ್ಯ.
ನೀನೊಲಿದಡೆ ಹುಲ್ಲೆಲ್ಲ ರಾಜಾನ್ನವಯ್ಯ.
ನೀನೊಲಿದಡೆ ಕೊರಡೆಲ್ಲ ಕಲ್ಪವೃಕ್ಷವಯ್ಯ.
ನೀನೊಲಿದಡೆ ಬರಡೆಲ್ಲ ಕಾಮಧೇನುವಯ್ಯ.
ನೀನೊಲಿದಡೆ ಏನುಂಟು ಏನಿಲ್ಲವಯ್ಯ.

ಅಖಂಡೇಶ್ವರಾ ೫೮

ನೀನೊಲಿದಡೆ ಜಗವೆಲ್ಲ ಕೊಂಡಾಡುತಿರ್ಪುದು ನೋಡಾ.
ನೀನೊಲಿಯದಿರ್ದಡೆ ಜಗವೆಲ್ಲ ಹೊತ್ತುಗಲ್ಲ[1] ಹೊತ್ತಿರ್ಪುದು ನೋಡಾ.
ನೀನೊಲಿದಡೆ ವೈರಿಗಳೆಲ್ಲ ಸಖರಪ್ಪರು ನೋಡಾ.
ನೀನೊಲಿಯದಿರ್ದಡೆ ಸಖರೆಲ್ಲ ವೈರಿಗಳಾಹರು ನೋಡಾ.
ನೀನೊಲಿದಡೆ ಬಾರದ ಪದಾರ್ಥ ಬಪ್ಪುದು ನೋಡಾ.
ನೀನೊಲಿಯದಿರ್ದಡೆ ಬರ್ಪುದು ಬಾರದೆ ಹೋಹುದು ನೋಡಾ.
ಇದು ಕಾರಣ ಅಖಂಡೇಶ್ವರಾ,
ನಿಮ್ಮ ಒಲುಮೆಯಿಂದ ಘನವು ಆವುದೂ ಇಲ್ಲ ನೋಡಾ. ೫೯

ಸತ್ಯನೆ[2]ಂದೆನಿಸಯ್ಯ ಎನ್ನ; ನಿತ್ಯನೆಂದೆನಿಸಯ್ಯ ಎನ್ನ.
ಭಕ್ತನೆಂದೆನಿಸಯ್ಯ ಎನ್ನ; ಮುಕ್ತನೆಂದೆನಿಸಯ್ಯ ಎನ್ನ.
ನಿಮ್ಮ ಪೂರ್ಣ ಒಲುಮೆಯ ಲೆಂಕನೆಂದೆನಿಸಯ್ಯ ಎನ್ನ.

ಅಖಂಡೇಶ್ವರಾ ೬೦

---

೧. ಲ್ಲು (ಅ) ೨. ವೆ (ಬ)

ಎನ್ನ ಕಂಗಳ ಮುಂದಣ ಕಾಮವ ಕಳೆದು
ನಿಮ್ಮ ಮಂಗಳ ಸ್ವರೂಪವ ತೋರಿಸಯ್ಯ ದೇವಾ.
ಎನ್ನ ಮನದ ಮುಂದಣ ಆಸೆಯ ಬಿಡಿಸಿ
ನಿಮ್ಮ ಮಂತ್ರದ ನೆನಹ[೧] ನೆಲೆಗೊಳಿಸಯ್ಯ ದೇವಾ.
ಎನ್ನ ಪ್ರಾಣದ ಮುಂದಣ ಪ್ರಪಂಚವ ಕೆಡಿಸಿ
ನಿಮ್ಮ ಪ್ರಸಾದವ ನೆಲೆಗೊಳಿಸಯ್ಯ ದೇವಾ.
ಎನ್ನ ತನುವ ಮುಸುಕಿದ ತಾಮಸವ ಕಳೆದು
ನಿಮ್ಮ ಭಕ್ತಿಯ ಅನುವ ತೋರಿಸಿ ಬದುಕಿಸಯ್ಯ ದೇವಾ.
ಅಖಂಡೇಶ್ವರಾ ೬೧

ಗುರುವ ನೋಡಿರೋ ಲಿಂಗವ ಹಾಡಿರೋ ಜಂಗಮಕ್ಕೆ ನೀಡಿರೋ
ಅಂಗಜವೈರಿ ಅಖಂಡೇಶ್ವರನ ಕೂಡಿರೋ ! ೬೨

ಭಕ್ತಿಗೆ ಮುಖವಾದಾತನೇ ಸದ್‌ಭಕ್ತನು.
ಯುಕ್ತಿಗೆ ವಿಚಾರದಲ್ಲಿದ್ದಾತನೇ ಸದ್‌ಭಕ್ತನು.
ಮುಕ್ತಿಗೆ ಮುಂದುವರಿದು ನಡೆವಾ[೨]ತನೇ ಸದ್‌ಭಕ್ತನು.
ನಮ್ಮ ಅಖಂಡೇಶ್ವರನ ಮಚ್ಚಿಸುವಾತನೇ ಮಹಾಸದ್‌ಭಕ್ತನು. ೬೩

ಗುರುಲಿಂಗಜಂಗಮದಲ್ಲಿ ಭಯ ಭಕ್ತಿ ಕರುಣ ಕಿಂಕರವಾಣ
ನಯ ನುಡಿ ನಮಸ್ಕಾರ ಕ್ಷಮೆ ದಮೆ ಶಾಂತಿ ಸೈರಣೆ
ದಯಾಗುಣ ವಿಶ್ವಾಸ ನಂಬುಗೆ ನಿಷ್ಠೆ ಸಮರಸವನುಳ್ಳ
ಸದ್‌ಭಕ್ತರ ತೋರಿ ಬದುಕಿಸಯ್ಯ ಎನ್ನ. ಅಖಂಡೇಶ್ವರಾ ೬೪

ಸತ್‌ಕಾಯಕದಿಂದೆ ತಂದ ದ್ರವ್ಯಂಗಳ
ಅಂದಂದಿಗೆ ಗುರುಲಿಂಗಜಂಗಮಕ್ಕೆ ಸವೆಸಿ
ಹಿಂದು ಮುಂದನೆಣಿಸದೆ ಇಂದಿಗೆ ನೂರು ವರುಷ ತುಂಬಿತ್ತೆಂಬ
ಆನಂದಭಕ್ತರ ತೋರಿ ಎನ್ನ ಬದುಕಿಸಯ್ಯ. ಅಖಂಡೇಶ್ವರಾ ೬೫

---

೧. ಹು (ಅ) ೨. ದಾ (ಅ, ಬ, ಕ)

ಸತ್ಯ ವಚನವ ನುಡಿವಾತನೇ ಸದ್ಭಕ್ತನು.
ಸದಾಚಾರದಲ್ಲಿ ನಡೆವಾತನೇ ಸದ್ಭಕ್ತನು.
ತಥ್ಯಮಿಥ್ಯ ರಾಗದ್ವೇಷವನಳಿದಾತನೇ ಸದ್ಭಕ್ತನಯ್ಯ.
ಅಖಂಡೇಶ್ವರಾ ೬೬

ನಾನಾ ದೇಶವ [೧]ತಿರುಗಿದಡಿಲ್ಲ[೧] ನಾನಾ ವ್ಯಾಪಾರವ [೨]ಮಾಡಿದಡಿಲ್ಲ[೨] ಏನು ಮಾಡಿದಡೇ[೩]ನು ಹುರುಳಿಲ್ಲ. ಅಖಂಡೇಶ್ವರ, ನೀವು ದಯೆಹುಟ್ಟಿ ಒಲಿದು ನೋಡಿ ಕರುಣಿಸಿಸಲಹದನ್ನಕ್ಕರ ಉಳಿದುದೆಲ್ಲ ವ್ಯರ್ಥ ನೋಡಾ.
೬೭

ಭಕ್ತನಾದಡೆ ನಿರ್ವಂಚಕ ಭಾವದಿಂದೆ
ತ್ರಿವಿಧಕ್ಕೆ ತ್ರಿವಿಧ ಪದಾರ್ಥವನರ್ಪಿಸಬೇಕು.
ಮಹೇಶ್ವರನಾದಡೆ ತ್ರಿವಿಧವ ಬಯಸದಿರಬೇಕು.
ಪ್ರಸಾದಿಯಾದಡೆ ಹ[೪]ಲ್ಲುಕಡ್ಡಿ ದರ್ಪಣ ಮೊದಲಾದ
ಸಕಲ ಪದಾರ್ಥಂಗಳ ಲಿಂಗಕ್ಕೆ ಕೊಟ್ಟಲ್ಲದೆ ಕೊಳ್ಳದಿರಬೇಕು.
ಪ್ರಾಣಲಿಂಗಿಯಾದಡೆ [೬]ಪ್ರಪಂಚ[೫] ನಾಸ್ತಿಯಾಗಿರಬೇಕು.[೬]
ಶರಣನಾದಡೆ ಸಕಲ ಭೋಗೋಪ[೭]ಭೋಗಂಗಳನು[೭]
ತಾನಿಲ್ಲದೆ [೮]ಲಿಂಗಮುಖವನರಿದು[೮] ಕೊಡಬೇಕು.
ಐಕ್ಯನಾದಡೆ ಸರ್ವವೂ ತನ್ನೊಳಗೆಂದರಿದು
ಸರ್ವರೊಳಗೆಲ್ಲ ತನ್ನನೆ ಕಾಣಬೇಕು.
ಇಂತೀ ಷಟ್‌ಸ್ಥಲದ ಅನುವನರಿದು ಆಚರಿಸುವ
ಮಹಾಶರಣರ ಆಳಿನ ಆಳು ನಾನಯ್ಯ !
ಅಖಂಡೇಶ್ವರಾ ೬೮

---

೧. ತಿರಿಗಿದಲ್ಲಿಲ್ಲ (ಅ), ತಿರಿಗಿದರಿಲ್ಲ (ಬ, ಕ)
೨. ಮಾಡಿದಲ್ಲಿಲ್ಲ (ಅ), ಮಾಡಿದರಿಲ್ಲ (ಬ, ಕ) ೩. ರೇ (ಅ, ಕ, ಬ)
೪. ಹು (ಅ, ಬ, ಕ) ೫. ಚು (ಅ, ಬ, ಕ) ೬. ಪ್ರಪಂಚವ ಹಿಂಗಿರಬೇಕು (ಡ)
೭. ಭೋಗವನು (ಅ, ಬ, ಕ, ಡ) ೮. ಲಿಂಗದ ಮೂಲವರಿದು (ಡ)

ಭಕ್ತಿಯ ೧ವರ್ಮವ೧ನರಿಯೆ; ಜ್ಞಾನದ ಕುಲಿರುಹನರಿಯೆ;
ವೈರಾಗ್ಯದ ದೃಢವನರಿಯೆ; ೩ವಿರತಿ೩ಯ ಹೊಲಬನರಿಯೆ;
ಮುಕ್ತಿಯ ಪಥವನರಿಯೆ. ಭಕ್ತಿ ಜ್ಞಾನ ವೈರಾಗ್ಯ ೪ವಿರತಿಗಳಿಂದೆ೪
ಮುಕ್ತರಾದ ಮಹಾ ಶರಣರ ತೊತ್ತಿನ ಮಗ ನಾನಯ್ಯ.
ಅಖಂಡೇಶ್ವರಾ ೬೯

ಶಿವ ಶಿವಾ ! ಎನ್ನ ಮನದಾಳಾಪವನವಧರಿಸಯ್ಯ ಸ್ವಾಮಿ.
ಎನಗೆ ಭಕ್ತಿ ಬೇಡ; ಎನಗೆ ಜ್ಞಾನ ಬೇಡ;
ಎನಗೆ ವೈರಾಗ್ಯ ಬೇಡ; ಎನಗೆ ವಿರತಿಯು ಬೇಡ.
ನಿಮ್ಮ ಶರಣರು ಉಟ್ಟ ಮೈಲಿಗೆಯ ಬಟ್ಟೆ,
ಉಗುಳಿದ ತಾಂಬೂಲ, ಒಕ್ಕು ಮಿಕ್ಕ ಪ್ರಸಾದವನೆ ಕರುಣಿಸಿ
ಅವರ ೫ಪಡುಗ ಕಾಯ್ವಂತೆ೫
ಪಾದರಕ್ಷೆಯನೆ ಹಿಡಿವುದಕ್ಕೆ ಯೋಗ್ಯನ ಮಾಡಿ
ಅವರ ಕಡೆಯ ಬಾಗಿಲನೆ ಕಾಯುವಂತೆ ಮಾಡಯ್ಯ ಎನ್ನ.
ಅಖಂಡೇಶ್ವರಾ ೭೦

ಸೋಹಂ ಎಂದಡೆ ಅಂತರಂಗದ ಗರ್ವ;
ಶಿವೋಹಂ ಎಂದಡೆ ಬಹಿರಂಗದ ಅಹಂಕಾರ;
ಈ ಉಭಯವನಳಿದು ದಾಸೋಹಂ ಎಂದಡೆ ಪರಮ ಪದವು.
ಇದು ಕಾರಣ ಎನಗೆ ದಾಸೋಹಂ ಭಾವವನೆ ಕರುಣಿಸಿ ಬದುಕಿಸಯ್ಯ
ಅಖಂಡೇಶ್ವರಾ ೭೧

ಸದ್‌ಭಕ್ತರೇ ಎನ್ನ ತಂದೆತಾಯಿಗಳಯ್ಯ.
ಸದ್‌ಭಕ್ತರೇ ಎನ್ನ ಬಂಧುಬಳಗವಯ್ಯ.
ಸದ್‌ಭಕ್ತರೇ ತಮ್ಮ ಒಕ್ಕುಮಿಕ್ಕುದನಿಕ್ಕಿ ಸಲಹಿದರಾಗಿ

---

೧. ಮರ್ಮವ (ಬ), ನಿಲವ (ಡ) ೨. ಅ (ಡ, ಇ) ೩. ವಿರತಿ (ಅ) ವಿರಕ್ತಿ (ಕ, ಡ) ೪. ವಿರಕ್ತಿಯಿಂದೆ (ಕ, ಡ), ವಿರತಿಯಿಂದೆ (ಅ)
೫. ಪಡುಗಾವ (ಕ), ಪಡುಗ (ಅ, ಬ, ಡ)

ಅಖಂಡೇಶ್ವರಾ,
ನಾ ನಿಮ್ಮ ಕಡೆಯ ಬಾಗಿಲ ಕಾಯ್ವುದಕೆ ಯೋಗ್ಯನಾದೆನಯ್ಯ. ೭೨

ಸತ್ಯದ ಮನೆಯಲ್ಲಿ ಶಿವನಿರ್ಪನಲ್ಲದೆ
[೧]ಅಸತ್ಯದ ಮನೆಯಲ್ಲಿ[೧] ಶಿವನಿರ್ಪನೇ [೨]ಇಲ್ಲಿಲ್ಲ[೨] ನೋಡಿರೋ !
ಇದು ಕಾರಣ ನಮ್ಮ ಅಖಂಡೇಶ್ವರಲಿಂಗವನೊಲಿಸಬೇಕಾದಡೆ
[೩]ಸತ್ಯವ[೩] ಸಾಧಿಸಬೇಕು ಕಾಣಿರೋ ! ೭೩

ಶ್ರೀಗುರುವೇ ತಂದೆತಾಯಿಗಳಲ್ಲದೆ
*ಮತ್ತೆ* ತಂದೆತಾಯಿಗಳಿಲ್ಲವಯ್ಯ ಎನಗೆ.
ಶಿವಶರಣರೇ ಬಂಧುಬಳಗವಲ್ಲದೆ
ಮತ್ತೆ* ಬಂಧುಬಳಗವಿಲ್ಲವಯ್ಯ ಎನಗೆ.
ಶಿವಕುಲವೇ ಮಹಾ ಕುಲವಲ್ಲದೆ
*ಮತ್ತೆ* ಕುಲವಿಲ್ಲವಯ್ಯ ಎನಗೆ.
ಅಖಂಡೇಶ್ವರಾ, ನೀವೆನ್ನ ಕುಲದೈವ ಮನೆದೈವವಲ್ಲದೆ
*ಮತ್ತೆ* ಕುಲದೈವ ಮನೆದೈವ ಇಲ್ಲವಯ್ಯ ಎನಗೆ. ೭೪

ಗುರುಕರಜಾತನಾದೆನಾಗಿ
ಆಣವಮಲ ಹೋಯಿತ್ತಯ್ಯ ಎನಗೆ.
ಭಕ್ತಜನ[೪]ಬಂಧುತ್ವ[೪]ವಾಯಿತ್ತಾಗಿ
ಮಾಯಾಮಲ ಹೋಯಿತ್ತಯ್ಯ ಎನಗೆ.
ದ್ರವ್ಯವ ತ್ರಿ[೫]ಲಿಂಗದ ಸೊಮ್ಮೆಂದರಿದೆನಾಗಿ
ಕಾರ್ಮಿಕಮಲ ಹೋಯಿತ್ತಯ್ಯ ಎನಗೆ.
ಇಂತೀ ಮಲತ್ರಯಂಗಳ ಬಲೆಯ ಹರಿದು
ನಿಮ್ಮ ಕರುಣದ ಕಂದನಾದೆನಯ್ಯ.
ಅಖಂಡೇಶ್ವರಾ ೭೫

---

೧. ಅಸತ್ಯದಲ್ಲಿ (ಅ, ಬ, ಕ) ೨. ಇಲ್ಲ (ಅ, ಕ) ೩. ಸತ್ಯವನೆ (ಅ)
*. ಬೇರೆ ಮತ್ತೆ (ಅ, ಬ, ಕ, ಡ) ೪. ಬಾಂಧತ್ವ ಅ, ಡ) ೫. ತ್ರೈ (ಅ,ಬ,ಡ),
ತ್ರಯಿ (ಕ)

ಬ್ರಾಹ್ಮಣನಾಗಲಿ ಕ್ಷತ್ರಿಯನಾಗಲಿ
ವೈಶ್ಯನಾಗಲಿ ಶೂದ್ರನಾಗಲಿ
ಆವ ಜಾತಿಯಲ್ಲಿ ಹುಟ್ಟಿ⁽¹⁾ದಾತ⁽¹⁾ನಾದಡಾಗಲಿ
ಗುರುಕಾರುಣ್ಯವ ಪಡೆದು ಅಂಗದ ಮೇಲೆ ಲಿಂಗಧಾರಣವಾಗಿ
ಆಚಾರ⁽²⁾ಕ್ರಿಯಾ⁽²⁾ಸಂಪನ್ನನಾದ ಮಹಾತ್ಮನೇ
ಮೂರು ಲೋಕಕ್ಕಧಿಕ ನೋಡಾ.

ಅದೆಂತೆಂದೊಡೆ :

"ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾಪ್ಯಂತ್ಯಜೋऽಪಿ ವಾ ।
ಶಿವಭಕ್ತಃ ಸದಾ ಪೂಜ್ಯಃ ಸರ್ವಾವಸ್ಥಾಂ ಗತೋऽಪಿ ವಾ ॥"

ಎಂದುದಾಗಿ

ಇಂತಪ್ಪ ಪರಮ ಶಿವಭಕ್ತನು ಶಿವನೆ ನೋಡಾ.

ಅಖಂಡೇಶ್ವರಾ ೭೬

ಭಕ್ತನ ನಡೆ ಶುದ್ಧ; ಭಕ್ತನ ನುಡಿ ಶುದ್ಧ.
ಭಕ್ತನ ತನು ಶುದ್ಧ; ಭಕ್ತನ ಮನ ಶುದ್ಧ.
ಭಕ್ತನ ಭಾವ ಶುದ್ಧ; ಭಕ್ತನ ಸರ್ವ ಕ್ರಿಯೆಯೆಲ್ಲ ಶುದ್ಧ.
ಅಖಂಡೇಶ್ವರಾ, ನೀ ಒಲಿದ ಸದ್‌ಭಕ್ತನ ಕಾಯವೇ ಕೈಲಾಸವಯ್ಯ. ೭೭

ಭಕ್ತನಾದಡೆ ಲಿಂಗನಿಷ್ಠಾಪರನಾಗಿರಬೇಕು.
ಭಕ್ತನಾದಡೆ ⁽³⁾ಜಂಗಮವೆ ಪ್ರಾಣವಾ⁽³⁾ಗಿರಬೇಕು.
ಭಕ್ತನಾದಡೆ ಅರ್ಥಪ್ರಾಣಾಭಿಮಾನಂಗಳು
ಶಿವನ ಕೂಡಿರಬೇಕು ನೋಡಾ.

ಅಖಂಡೇಶ್ವರಾ ೭೮

---

೧. ದವ (ಇ) ೨. ಕ್ರೀಯ (ಅ, ಬ) ೩. ಜಂಗಮಪ್ರಾಣಿಯಾ (ಅ), ಜಂಗಮ ಪ್ರಾಣವಾ (ಬ, ಕ)

ಅರ್ಥ ಗುರುವಿನಲ್ಲಿ ಸವೆದು, ಪ್ರಾಣ ಲಿಂಗದಲ್ಲಿ ಸವೆದು,
ಅಭಿಮಾನ ಜಂಗಮದಲ್ಲಿ ಸವೆದು, ಆ ಗುರುಲಿಂಗಜಂಗಮವೇ
ತನ್ನ ಪ್ರಾಣವೆಂದು ತಿಳಿಯಬಲ್ಲಾತನೇ ಸದ್‌ಭಕ್ತನು ನೋಡಾ.
ಅಖಂಡೇಶ್ವರಾ ೭೯

ಮನದಲ್ಲಿ ನಂಬಿಗೆ ಮಾತಿನಲ್ಲಿ ಕಿಂಕರವಾಣವ ಬಿಡದೆ
ಲಿಂಗ ಜಂಗಮ ಒಂದೇ ಎಂದು ಭಾವಿಸಿ
ಪೂಜಿಸುವಾತನೇ ಸದ್‌ಭಕ್ತನು ನೋಡಾ.
ಅಖಂಡೇಶ್ವರಾ ೮೦

ತನು ವಂಚನೆಯಿಲ್ಲದೆ ಮಾಡುವಾತ ಭಕ್ತ;
ಮನ ವಂಚನೆಯಿಲ್ಲದೆ ಕೂಡುವಾತ ಭಕ್ತ;
ಧನ ವಂಚನೆಯಿಲ್ಲದೆ ನೀಡುವಾತನೇ ಸದ್‌ಭಕ್ತ ನೋಡಾ.
ಅಖಂಡೇಶ್ವರಾ ೮೧

ಮುಕ್ತಿಯ ಪಡೆವೆನೆಂದು ಯುಕ್ತಿಗೆಟ್ಟು
ಸಕಲ ತೀರ್ಥ ಕ್ಷೇತ್ರಂಗಳಿಗೆಡೆಯಾಡಿ
ತೊಟ್ಟನೆ ತೊಳಲಿ ಬಳಲಿ ಬೆಂಡಾಗಲೇತಕೋ ?
ಒಬ್ಬ ಶಿವಭಕ್ತನ ಅಂಗಳದಲ್ಲಿ ಎಂಬತ್ತೆಂಟುಕೋಟಿ ಕ್ಷೇತ್ರಂಗಳಿರ್ಪವು.
ಆತನ ಬಚ್ಚಲಲ್ಲಿ ಅರವತ್ತಾರು ಕೋಟಿ ತೀರ್ಥಂಗಳಿರ್ಪವು.
ಆತನ ಕಾಯವೇ ಕೈಲಾಸ,
ಆತನಂಗದ ಮೇಲಿರ್ಪ ಲಿಂಗವೇ ಅನಾದಿ ಪರಶಿವನು.
ಇದು ಕಾರಣ ಅಂತಪ್ಪ ಸದ್‌ಭಕ್ತನ ಗೃಹಮಂ ಪೊಕ್ಕು
ಆತನ ದರ್ಶನ ಸ್ಪರ್ಶನವಾದಾತಂಗೆ
ಅನಂತಕೋಟಿ ಭವಪಾತಕಂಗಳು ಪರಿಹರವಪ್ಪುವು ನೋಡಾ.
ಆತನ ಒಕ್ಕುಮಿಕ್ಕುದ ಕೊಂಡಾತಂಗೆ
ಮುಂದೆ ಮುಕ್ತಿಯಪ್ಪುದು ತಪ್ಪದು ನೋಡಾ.
ಅಖಂಡೇಶ್ವರಾ ೮೨

---

೧. ಬು (ಅ, ಕ)

ಸ್ನೇಹಸಮರಸ ಮೋಹವಿರಬೇಕು ಗುರುವಿನಲ್ಲಿ.
ಸ್ನೇಹಸಮರಸ ಮೋಹವಿರಬೇಕು ಲಿಂಗದಲ್ಲಿ.
ಸ್ನೇಹಸಮರಸ ಮೋಹವಿರಬೇಕು ಜಂಗಮದಲ್ಲಿ.
ಸ್ನೇಹಸಮರಸ ಮೋಹವಿರಬೇಕು ಪಾದೋದಕ ಪ್ರಸಾದದಲ್ಲಿ.
ಸ್ನೇಹಸಮರಸ ಮೋಹವಿರಬೇಕು [೧]ಶರಣಜನ ಶಿವಭಕ್ತರಲ್ಲಿ[೧].
ಇಂತಿವರಲ್ಲಿ ಸ್ನೇಹಸಮರಸ ಮೋಹವನುಳ್ಳ
ಸದ್ಭಕ್ತರ ತೋರಿ ಬದುಕಿಸಯ್ಯ ಎನ್ನ.

ಅಖಂಡೇಶ್ವರಾ ೮೩

ಹೊನ್ನೆನ್ನದು ಹೆಣ್ಣೆನ್ನದು ಮಣ್ಣೆನ್ನದು
ತನುವೆನ್ನದು ಮನವೆನ್ನದು ಧನವೆನ್ನದು ಎಂದು
ಭಿನ್ನ ಭಕ್ತಿಯ ಮಾಡಿ
ಬಡ್ಡಿಕಾರನಂತೆ ಒಂದು ಕೊಟ್ಟು ಎರಡು ಪಡೆವ
ಜಡಜೀವಿಗಳ ಭಕ್ತರೆನಬಹುದೇನಯ್ಯ.

ಅಖಂಡೇಶ್ವರಾ ೮೪

ಹೊನ್ನಿನಾಶೆಯ ಮಾಡುವವನಲ್ಲ ಭಕ್ತ.
ಹೆಣ್ಣು ತನ್ನದೆಂಬುವವನಲ್ಲ ಭಕ್ತ.
ಮಣ್ಣಿಂಗೆ ಮನ ಸೋಲುವವನಲ್ಲ ಭಕ್ತ.
ಅಖಂಡೇಶ್ವರಾ, ನಿಮ್ಮ ಭಕ್ತರ ಮಹಿಮೆಯ ನೀವೇ ಬಲ್ಲಿರಿ. ೮೫

ಅಂಗ ಆಪ್ತ ಸ್ಥಾನ ಸದ್ಭಾವ ಎಂಬ ಚತುರ್ವಿಧ ಭಕ್ತಿಯಿಂದೆ
ಗುರುವಿಂಗೆ ತನುವ ಸವೆಸಿದಡೆ
ಆ ತನುವಿನಲ್ಲಿ ದೀಕ್ಷಾ ಶಿಕ್ಷಾ ಸ್ವಾನುಭಾವ ಜ್ಞಾನಸ್ವರೂಪವಾದ
ಶ್ರೀಗುರುದೇವನು ನೆಲೆಗೊಂಬನು ನೋಡಾ.
ಮಂತ್ರ ಧ್ಯಾನ ಜಪ ಸ್ತೋತ್ರವೆಂಬ ನಾಲ್ಕು ತೆರದ ಭಕ್ತಿಯಿಂದೆ

---

೧. ಶಿವಭಕ್ತ ಶರಣಜನಂಗಳಲ್ಲಿ (ಅ)

ಲಿಂಗಕ್ಕೆ ಮನವ ಸವೆಸಿದಡೆ
ಆ ಮನದಲ್ಲಿ ಇಷ್ಟ ಪ್ರಾಣ ಭಾವ ಸ್ವರೂಪವಾದ
ಪರಶಿವಲಿಂಗವು ನೆಲೆಗೊಂಬುದು ನೋಡಾ.
ಅನ್ನ ವಸ್ತ್ರ ಆಭರಣಾದಿ ಹದಿನೆಂಟು ತೆರದ ಭಕ್ತಿಯಿಂದೆ
ಜಂಗಮಕ್ಕೆ ಧನವ ಸವೆಸಿದಡೆ
ಆ ಧನದಲ್ಲಿ ಸ್ವಯ ಚರ ಪರ ಸ್ವರೂಪವಾದ
ಮಹಾಘನ ಜಂಗಮವು ನೆಲೆಗೊಂಬುದು ನೋಡಾ.
ಇಂತೀ ತ್ರಿವಿಧ ಸಂಪತ್ತು ನಿಮ್ಮ ಶರಣರಿಗಲ್ಲದೆ
ಉಳಿದವರಿಗಳವಡದಯ್ಯ.

ಅಖಂಡೇಶ್ವರಾ ೮೬

ಗುರುಸೇವೆಯಲ್ಲಿ [೧]ತನು[೧] ಸವೆದು
ಲಿಂಗಪೂಜೆಯಲ್ಲಿ [೨]ಮನ[೨] ಸವೆದು
ಜಂಗಮ ದಾಸೋಹದಲ್ಲಿ [೩]ಧನ[೩] ಸವೆದು
ಇಂತೀ ತ್ರಿವಿಧ ಸಂಪತ್ತು ನೆಲೆಗೊಂಡ ಸದ್ಭಕ್ತಂಗೆ
ನಮೋ ನಮಃ ಎಂಬೆನಯ್ಯ.

ಅಖಂಡೇಶ್ವರಾ ೮೭

ತನುವೆ ಗುರುವೆಂದರಿದ ಬಳಿಕ
ಬಿಡದೆ ಗುರುಭಕ್ತಿಯ ಮಾಡಲೇಬೇಕು.
ಮನವೆ ಲಿಂಗವೆಂದರಿದ ಬಳಿಕ
ಬಿಡದೆ ಲಿಂಗಪೂಜೆಯ ಮಾಡಲೇಬೇಕು.
ಧನವೆ ಜಂಗಮವೆಂದರಿದ ಬಳಿಕ
ಬಿಡದೆ ಜಂಗಮಕ್ಕೆ ಬೇಡಿದ ಪದಾರ್ಥವನೀಯಲೇಬೇಕು.
ಇಂತಪ್ಪ ಸದ್ಭಕ್ತನ ತೋರಿ ಬದುಕಿಸಯ್ಯ ಎನ್ನ.

ಅಖಂಡೇಶ್ವರಾ ೮೮

---

೧. ತನುವ (ಅ, ಕ) ೨. ಮನವ (ಅ, ಕ) ೩. ಧನವ (ಅ, ಕ)

ಹಿಂದಣ ಜನ್ಮದ ಸಂಸಾರವ ಮರೆದು
ಮುಂದಣ ಭವಬಂಧನಂಗಳ ಜರಿದು
ಸಂದೇಹ ಸಂಕಲ್ಪಂಗಳ ಹರಿದು
ನಿಮ್ಮ ಅವಿರಳ ಭಕ್ತಿಯ ಬೆಳಗಿನಲ್ಲಿ ಬೆರೆದು
ಓಲಾಡುವ ಮಹಾಮಹಿಮರ ತೋರಿ ಬದುಕಿಸಯ್ಯ ಎನ್ನ.
ಅಖಂಡೇಶ್ವರಾ ೮೯

ಉಪಾಧಿಯನಳಿದು ನಿರುಪಾಧಿಯ ತಿಳಿದು
ಸಹಜಮಾಟದಲ್ಲಿ ಸುಳಿದು
ಜಾತಿಸೂತಕ ಪ್ರೇತಸೂತಕ ಜನನಸೂತಕ ಉಚ್ಛಿಷ್ಟಸೂತಕ
ರಜಸ್ಸೂತಕವೆಂಬ ಪಂಚಸೂತಕಂಗಳ ಕಳೆದು
ಸದಾಚಾರ ಲಿಂಗಾಚಾರ ಶಿವಾಚಾರ ಗಣಾಚಾರ
ಭೃತ್ಯಾಚಾರವೆಂಬ ಪಂಚಾಚಾರಂಗಳಳವಟ್ಟು
ಪಂಚಭೂತಂಗಳ ಪರಿಹರಿಸಿ
ಪಂಚಪ್ರಾಣವಾಯುಗಳ ಸಂಚಲ ಗುಣವಳಿದು
ಪಂಚೇಂದ್ರಿಯಂಗಳಲ್ಲಿ ಪಂಚಲಿಂಗಂಗಳ ಪ್ರತಿಷ್ಠಿಸಿ
ಪಂಚಬ್ರಹ್ಮದ ಮೂಲವನರಿದು
ಮೂಲೋಕದೊಡೆಯನಲ್ಲಿ ಮನವಡಗಿರ್ಪ
ಮಹಾಶರಣರ ಶ್ರೀಪಾದಕ್ಕೆ ನಮೋ [೧]ನಮಃ[೧] ಎಂಬೆನಯ್ಯ
ಅಖಂಡೇಶ್ವರಾ ೯೦

ತನುವಿನ ಪ್ರಕೃತಿಯ[೨]ಳಿದು[೨] ಮನದ ಮಾಯವಡಗಿ
ಆತ್ಮನ ಅಹಂ ಮಮತೆ ಕೆಟ್ಟು ತಾನೆ ತಾನಾಗಿ ಮಾಡಿ ಮೈಮರೆದ
ಮಹಾಮಹಿಮರ ತೋರಿಸಿ ಬದುಕಿಸಯ್ಯ ಎನ್ನ.
ಅಖಂಡೇಶ್ವರಾ ೯೧

---

೧. ನಮೋ (ಅ, ಕ)     ೨. ನಳಿದು (ಬ, ಕ)

ತಾನೆ ಗುರುವಾಗಿ ಗುರುಭಕ್ತಿಯ ಮಾಡುತಿರ್ಪನು.
ತಾನೆ ಲಿಂಗವಾಗಿ ಲಿಂಗಪೂಜೆಯ ಮಾಡುತಿರ್ಪನು.
ತಾನೆ ಜಂಗಮವಾಗಿ ಜಂಗಮದಾಸೋಹವ ಮಾಡುತಿರ್ಪನು.
ತಾನೆ ಪಾದೋದಕ ಪ್ರಸಾದವಾಗಿ
ಪಾದೋದಕ ಪ್ರಸಾದವ ಸೇವನೆಯ ಮಾಡುತಿರ್ಪನು.
ತಾನೆ ವಿಭೂತಿ ರುದ್ರಾಕ್ಷಿಯಾಗಿ ವಿಭೂತಿ ರುದ್ರಾಕ್ಷಿಯ ಧರಿಸುತಿರ್ಪನು.
ತಾನೆ ಮಂತ್ರವಾಗಿ ಶಿವಮಂತ್ರವ ಜಪಿಸುತಿರ್ಪನು.
ಇಂತೀ ಅಷ್ಟಾವರಣವೇ ಅಂಗವಾಗಿ ಅಷ್ಟಾವರಣವೇ ಲಿಂಗವಾಗಿ
ಅಷ್ಟಾವರಣವೇ ಸಂಗವಾಗಿ ಅಷ್ಟಾವರಣವೇ ಸಮರಸವಾಗಿರ್ಪ
ಸದ್‌ಭಕ್ತನು ಸಾಕ್ಷಾತ್ ಪರವಸ್ತುವು ತಾನೇ ಅಯ್ಯ.
ಅಖಂಡೇಶ್ವರಾ ೯೨

ಹಾಡಿದರೆ ಹಾಡುವೆನಯ್ಯ ಶಿವಶರಣರ ಎನ್ನ ಮನವೊಲಿದು.
ನೋಡಿದರೆ ನೋಡುವೆನಯ್ಯ ಸದ್‌ಭಕ್ತಸ್ತ್ರೀಯರ
ಎನ್ನ ಹೆತ್ತ ತಾಯಿಗಳೆಂದು
ಬೇಡಿದರೆ ಬೇಡುವೆನಯ್ಯ ಎನ್ನ ಶ್ರೀಗುರುವಿನಲ್ಲಿ ನಿತ್ಯ ನಿಜ ಮುಕ್ತಿಯ.
ಕೂಡಿದರೆ ಕೂಡುವೆನಯ್ಯ ಅಖಂಡೇಶ್ವರಾ,
ನಿಮ್ಮ ಶ್ರೀ ಚರಣವನೊಡಗೂಡುವ ಅವಿರಳ ಸಮರಸಭಕ್ತಿಯಲ್ಲಿ. ೯೩

ಎನ್ನ ತನುವೆ ಶ್ರೀಗುರುಸ್ಥಾನವಯ್ಯ.
ಎನ್ನ ಮನವೆ ಲಿಂಗಸ್ಥಾನವಯ್ಯ.
ಎನ್ನ ಆತ್ಮವೆ ಜಂಗಮಸ್ಥಾನವಯ್ಯ.
ಎನ್ನ ಪ್ರಾಣವೆ ಪ್ರಸಾದಸ್ಥಾನವಯ್ಯ.
ಎನ್ನ ಭಾವವೇ ಪಾದೋದಕಸ್ಥಾನವಯ್ಯ.
ಎನ್ನ ಲಲಾಟವೇ ವಿಭೂತಿಸ್ಥಾನವಯ್ಯ.
ಎನ್ನ [೧]ಗಳವೇ[೧] ರುದ್ರಾಕ್ಷಿಸ್ಥಾನವಯ್ಯ.

---

೧. ಗರಳೇ (ಅ)

ಎನ್ನ ಜಿಹ್ವೆಯೇ ಶಿವಮಂತ್ರಸ್ಥಾನವಯ್ಯ.
ಎನ್ನ ಕಂಗಳೇ ಲಿಂಗಾಚಾರಸ್ಥಾನವಯ್ಯ.
ಎನ್ನ ಶ್ರೋತ್ರವೇ ಶಿವಾಚಾರಸ್ಥಾನವಯ್ಯ.
ಎನ್ನ ವಾಕ್ಯವೇ ಭೃತ್ಯಾಚಾರಸ್ಥಾನವಯ್ಯ.
ಎನ್ನ ಹಸ್ತವೇ ಗಣಾಚಾರಸ್ಥಾನವಯ್ಯ.
ಎನ್ನಾಚರಣವೇ ಸದಾಚಾರಸ್ಥಾನವಯ್ಯ.
ಎನ್ನ ಷಡ್‌ಭೂತಂಗಳೇ ಷಟ್‌ಸ್ಥಲಸ್ಥಾನಂಗಳಯ್ಯ.
ಎನ್ನ ಸುಜ್ಞಾನವೇ ಶಿವಾನುಭಾವಸ್ಥಾನವಯ್ಯ.
ಇಂತೀ ಅಷ್ಟಾವರಣ ಪಂಚಾಚಾರ ಷಟ್‌ಸ್ಥಲ
ಶಿವಾನುಭಾವವನೊಳಗೊಂಡ ಎನ್ನ ಚಿದಂಗವೇ
ಮಹಾ ಕೈಲಾಸವಯ್ಯ ನಿಮಗೆ!

ಅಖಂಡೇಶ್ವರಾ ೯೪

ಆದಿಯ ಭಕ್ತ ಅನಾದಿಯ ಜಂಗಮ ಮಧ್ಯದಲ್ಲಿ ಹುಟ್ಟಿದ ಪದಾರ್ಥ
ಈ ಮೂರು ಬೀಜವೃಕ್ಷಫಲದ ಹಾಗೆ ಒಂದೆಯೊಂದು ಕಾಂಬ
ಮಹಾ ಭಕ್ತರ ತೋರಿ ಬದುಕಿಸಯ್ಯ ಎನ್ನ.

ಅಖಂಡೇಶ್ವರಾ ೯೫

ತನುವಿಲ್ಲದೆ ಮಾಡಿ, ಧನವಿಲ್ಲದೆ
ಮನವಿಲ್ಲದೆ ಕೊಡಬಲ್ಲಾತನೇ ಮಹಾಭಕ್ತನು ನೋಡಾ
ಅಖಂಡೇಶ್ವರಾ ೯೬

ಮಾಡುವ ಭಕ್ತ ನೀನೆಯೆಂದರಿದೆ;
ಮಾಡಿಸಿಕೊಂಬ ದೇವ ನೀನೆಯೆಂದರಿದೆ.
ಇದು ಕಾರಣ ಅಖಂಡೇಶ್ವರಾ,
ನಾ ನಿಮ್ಮ ಫಲಪದವ ಬೇಡಲಿಲ್ಲ;
ನೀವೊಲಿದು ಎನಗೆ ಕೊಡಲಿಲ್ಲ. ೯೭

ತನು ನಿಮಗೆ ಸಮರ್ಪಿಸಿಹೆನೆಂದಡೆ ತನುವಿಲ್ಲವಯ್ಯ ಎನಗೆ.
ಅದೇನು ಕಾರಣವೆಂದೊಡೆ :
ನೀವು ಗುರುವಾಗಿ ಬಂದೆನ್ನ ತನುವನೊಳಕೊಂಡಿರ್ಪಿರಿ.
ಮನವ ನಿಮಗರ್ಪಿಸಿಹೆನೆಂದಡೆ ಮನವಿಲ್ಲವಯ್ಯ ಎನಗೆ.
ಅದೇನು ಕಾರಣವೆಂದೊಡೆ :
ನೀವು ಲಿಂಗವಾಗಿ ಬಂದೆನ್ನ ಮನವನೊಳಕೊಂಡಿರ್ಪಿರಿ.
ಧನವ ನಿಮಗರ್ಪಿಸಿಹೆನೆಂದಡೆ ಧನವಿಲ್ಲವಯ್ಯ ಎನಗೆ.
ಅದೇನು ಕಾರಣವೆಂದೊಡೆ :
ನೀವು ಜಂಗಮವಾಗಿ ಬಂದೆನ್ನ ಧನವನೊಳಕೊಂಡಿರ್ಪಿರಾಗಿ
ಎನ್ನ ತನುವೇ ಗುರು, ಮನವೇ ಲಿಂಗ, ಧನವೇ ಜಂಗಮವಾಯಿತ್ತಾಗಿ
ಅಖಂಡೇಶ್ವರಾ, ನಾ [1]ನಿಮ್ಮೊಳಿಪ್ಪೆನು[1]. ೯೮

ಭಾವವಿಲ್ಲದ ಬಯಲಮೂರ್ತಿಯಾದವ ಭಕ್ತ.
ಆ ಭಕ್ತನ ಹೃದಯದಲ್ಲಿ ಮೂರ್ತಿಗೊಂಡಾತ ಜಂಗಮ.
ಆ ಜಂಗಮದ ಅಂಗೈಯಲ್ಲಿರ್ಪುದು ಲಿಂಗ.
ಆ ಲಿಂಗದ ಗರ್ಭದೊಳಗೆ ಸಕಲ [2]ಸ್ಥಳಕುಳ[2]ಂಗಳಿರ್ಪವು ನೋಡಾ.
ಅಖಂಡೇಶ್ವರಾ ೯೯

ಕಾಯವಿಲ್ಲದ ಭಕ್ತ ಜೀವವಿಲ್ಲದ ಭಕ್ತ ಭಾವವಿಲ್ಲದ ಭಕ್ತ
ಅಖಂಡೇಶ್ವರಾ, ನಿಮ್ಮನೊಡಗೂಡಿದ ಮಹಾಭಕ್ತನು
ಉಪಮೆಗೆ ಉಪಮಾತೀತನು ನೋಡಾ ! ೧೦೦

---

೧. ನಿಮ್ಮೊಳಡಗಿದೆನು (ಅ, ಕ).
ನಿಮ್ಮೊಳಡಗಿರ್ದೆನು (ಬ)

೨. ತತ್ವ ಸ್ಥಳಕುಳ (ಅ)

ಮಾಡುವ ತನುವು ನೀವೇ ಆದಿರಿ.
ಕೂಡುವ ಮನವು ನೀವೇ ಆದಿರಿ.
ನೀಡುವ ಧನವು ನೀವೇ ಆದಿರಿ.
ಅಖಂಡೇಶ್ವರಾ, ನಾನೂ ಇಲ್ಲ; ನೀವೂ ಇಲ್ಲ; ಏನೇನೂ ಇಲ್ಲ. ೧೨೧

ಅಂತು ವಚನಗಳು ೨೦೭

# ಮಹೇಶ್ವರಸ್ಥಲ

ಪರಸ್ತ್ರೀಯರ ಮುಟ್ಟದಿರಬೇಕು.
ಪರಧನವನಪಹರಿಸದಿರಬೇಕು.
ಪರದೈವವ ಪೂಜಿಸದಿರಬೇಕು.
ಪರಹಿಂಸೆಯ ಮಾಡದಿರಬೇಕು.
ಪರಲೋಕದ ಫಲಪದವ ಬಯಸದಿರಬೇಕು.
ಮನವು ನಿರ್ವಯಲಾಗಿ ಇಷ್ಟಲಿಂಗದಲ್ಲಿ ನೈಷ್ಠೆ ಬಲಿದಿರಬೇಕು.
ಕಷ್ಟಜನ್ಮಂಗಳ ಕಡೆಗೊಡ್ಡಿ[೧]ಪ್ಪಾತನೇ ವೀರಮಾಹೇಶ್ವರನು ನೋಡಾ
ಅದೆಂತೆಂದೊಡೆ :

"ಪರಸ್ತ್ರೀಯಂ ಪರಾರ್ಥಂ ಚ [೨]ವರ್ಜಯೇತ್[೨] ಭಾವಶುದ್ಧಿಮಾನ್ ।
ಲಿಂಗನಿಷ್ಠಾನಿಯುಕ್ತಾತ್ಮಾ ಮಾಹೇಶ್ವರ [೩]ಉದಾಹೃತಃ[೩] ॥"

ಎಂದುದಾಗಿ
ಇಂತಪ್ಪ ಪರಮ ಮಹೇಶ್ವರನ ಶ್ರೀಪಾದಕ್ಕೆ ನಮೋ ನಮೋ
ಎಂಬೆನಯ್ಯಾ. ಅಖಂಡೇಶ್ವರಾ ೧

ಹುಸಿ ಕಳವು ಪರದಾರ ಪರಹಿಂಸೆಯ ಬಿಟ್ಟು
ಲೋಕದ ನಚ್ಚು ಮಚು ಸುಟ್ಟು
ಸಚ್ಚಿದಾನಂದ ಲಿಂಗದಲ್ಲಿ ಮನವು ಬೆಚ್ಚಂತಿರ್ಪ
ಅಚ್ಚ ಮಹೇಶ್ವರರ ತೋರಿ ಬದುಕಿಸಯ್ಯ ಎನ್ನ
ಅಖಂಡೇಶ್ವರಾ ೨

---

೧. ಗೊಂಡಿ (ಅ), ಗೊದ್ದಿ (ಡ) ೨. ವರ್ಜಿತೋ (ಅ,ಬ,ಕ), ವರ್ಜಿತಾ (ಡ)
೩. ಮಹಾಸ್ಥಲಂ (ಅ, ಬ, ಕ, ಡ)

ನೈಷ್ಠಿಕಭಾವ, ನಂಬುಗೆ ಇಲ್ಲದ ಬಳಿಕ,
ಎಷ್ಟು ಓದಿದಡೇನು? ಎಷ್ಟು ಕೇಳಿದಡೇನು? ಎಷ್ಟು ಹೇಳಿಡಡೇನು?
ಎಷ್ಟು ಪೂಜೆಯ ಮಾಡಿದಡೇನು
ಅದು ನಷ್ಟವಲ್ಲದೆ ದೃಷ್ಟಕ್ಕೆ ಸಂಧಾನವಲ್ಲ ನೋಡಾ!
ಇದು ಕಾರಣ,ನೈಷ್ಠೆ ಬಲಿದು ಭಾವತುಂಬಿ
ನಂಬುಗೆ ಇಂಬುಗೊಂಡು ಮಾಡುವುದೆ ದೇವರ ಪೂಜೆ
ಅದೇ ನಮ್ಮ ಅಖಂಡೇಶ್ವರಲಿಂಗದ ಒಲುಮೆ. ೩

*ನೈಷ್ಠೆ[1]ಯೆಂಬುದು[2] ತನುವಿನ ಪ್ರಕೃತಿಯ ಕೆಡಿಸುವುದು.
*ನೈಷ್ಠೆಯೆಂಬುದು ಮನದ ಮಾಯವನಳಿವುದು.
*ನೈಷ್ಠೆಯೆಂಬುದು ಜ್ಞಾನದ ಬಟ್ಟೆಯ ತೋರುವುದು.
*ನೈಷ್ಠೆಯೆಂಬುದು ಅಖಂಡೇಶ್ವರಲಿಂಗವನೊಲಿಸುವುದು. ೪

*ನೈಷ್ಠೆ ನೆಲೆಗೊಳ್ಳಬೇಕು ಗುರುಭಕ್ತಿಯ ಮಾಡುವಲ್ಲಿ.
*ನೈಷ್ಠೆ ನೆಲೆಗೊಳ್ಳಬೇಕು ಲಿಂಗಪೂಜೆಯ ಮಾಡುವಲ್ಲಿ.
*ನೈಷ್ಠೆ ನೆಲೆಗೊಳ್ಳಬೇಕು ಜಂಗಮವನರ್ಚಿಸುವಲ್ಲಿ.
*ನೈಷ್ಠೆ ನೆಲೆಗೊಳ್ಳಬೇಕು ಪಾದೋದಕ ಪ್ರಸಾದವಕೊಂಬುವಲ್ಲಿ.
*ನೈಷ್ಠೆ ನೆಲೆಗೊಳ್ಳಬೇಕು ನಮ್ಮ ಅಖಂಡೇಶ್ವರಲಿಂಗವನೊಲಿಸುವಲ್ಲಿ. ೫

ಛಲವಿರಬೇಕು ಶಿವಭಕ್ತಿಯ ಮಾಡುವಲ್ಲಿ ಹಿಡಿದು ಬಿಡೆನೆಂಬ.
ಛಲವಿರಬೇಕು ನಿತ್ಯನೇಮದಲ್ಲಿ ಹಿಡಿದು ಬಿಡೆನೆಂಬ.
ಛಲವಿರಬೇಕು ಶೀಲವ್ರತದಲ್ಲಿ ಹಿಡಿದು ಬಿಡೆನೆಂಬ.
ಛಲವಿರಬೇಕು ನಮ್ಮ ಅಖಂಡೇಶ್ವರಲಿಂಗವ ಕೂಡಿ.
ಎಂದೆಂದೂ ಅಗಲಬಾರದೆಂಬ ನೈಷ್ಠೆಯಲ್ಲಿ. ೬

---

೧. ರೀ (ಬ, ಡ)    * ನಿಷ್ಠೆ (ಇ)
೨. ಯೆಂಬುವದು (ಬ)

ಗುರುಭಕ್ತಿಯ ಮಾಡಿದ ಬಳಿಕ,
ಸರ್ವ ಅವಗುಣಂಗಳು[೧] ಹಿಂಗಿರಬೇಕು.
ಲಿಂಗಪೂಜೆಯ ಮಾಡಿದ ಬಳಿಕ,
ಅಂಗದ ಪ್ರಕೃತಿ ಹಿಂಗಿರಬೇಕು.
ಜಂಗಮಾರ್ಚನೆಯ ಮಾಡಿದ ಬಳಿಕ,
ಸಂಸಾರದಲ್ಲಿ ಮೋಹವ ತೊಲಗಿರಬೇಕು.
ಪಾದೋದಕ ಪ್ರಸಾದವ ಕೊಂಡ ಬಳಿಕ,
ಇಹಪರ ಭೋಗ ಮೋಕ್ಷಂಗಳ ಬಯಕೆ ಅರತಿರಬೇಕು.
ಇದೇ ನಮ್ಮ ಅಖಂಡೇಶ್ವರ ಲಿಂಗದ ಕೂಟ ! ೭

ಫಲ [೨]ಪದವಿಯು[೨] ಬಯಸಿ ಮಾಡಲಾಗದು ಗುರುಭಕ್ತಿಯ.
ಫಲ ಪದವಿಯ ಬಯಸಿ ಮಾಡಲಾಗದು ಲಿಂಗಪೂಜೆಯ.
ಫಲ ಪದವಿಯ ಬಯಸಿ ಮಾಡಲಾಗದು ಜಂಗಮಾರ್ಚನೆಯ.
ಅದೇನು ಕಾರಣವೆಂದೊಡೆ :
ಬಯಕೆಯ ಭಕ್ತಿಯ, ಪೂರ್ವ ಪುರಾತನರು ಮೆಚ್ಚರು.
ನಮ್ಮ ಅಖಂಡೇಶ್ವರದೇವನು ಹಂಗಿನ ಭಕ್ತರನೊಲ್ಲ ನೋಡಾ ! ೮

ನಿತ್ಯ ಗುರುಲಿಂಗಜಂಗಮಕ್ಕೆ ನಿತ್ಯ ಪೂಜೆಯ ಮಾಡಿ
ನಿತ್ಯ ಮುಕ್ತಿಯ ಪಡೆಯಲರಿಯದೆ
ಮತ್ತತನದಿಂದೆ ಅನಿತ್ಯ ಫಲ ಭೋಗವ ಪಡೆದು
ಮರ್ತ್ಯದ ಭವಜಾಲದಲ್ಲಿ ಸುತ್ತಿ ಸುತ್ತಿ ಸುಳಿದು ತೊಳಲಿ ಬಳಲುವ
[೩]ವ್ಯರ್ಥರ[೩] ನೋಡಿ ನಗುತಿರ್ದನು ನಮ್ಮ ಅಖಂಡೇಶ್ವರನು ೯

ಮೊಟ್ಟೆ ಮೊಟ್ಟೆ ಪತ್ರಿ ಪುಷ್ಪವ ತಂದು
[೪]ವಟ ವಟ[೪] ಲಿಂಗವ ಪೂಜಿಸಿದಡೇನು
ತನುಮನದ [೫]ಕೆಟ್ಟತನವ[೫] ಹಿಂಗದನ್ನಕ್ಕರ?

---

೧. ಳ (ಬ) ೨. ಪದವ (ಅ, ಬ) ೩. ವ್ಯರ್ಥ ಜೀವಿಗಳ (ಇ)
೪. ಮೊಟ್ಟಿ ಮೊಟ್ಟಿ (ಅ, ಬ) ೫. ಕೆಟ್ಟ ತನುವು (ಡ, ಇ), ಕೆಟ್ಟ ಅವಗುಣವ (ಕ)

ಹುಸಿ ಕಳವು ಪರದಾರ [1]ವ್ಯಾಪಾರ[1]ದಲ್ಲಿ
ಹರಿದಾಡುವ ದುರುಳ ಬುದ್ಧಿಯ ದುರಾಚಾರಿಗಳಿಗೆ
ದೂರನಾಗಿರ್ಪನು ನೋಡಾ ನಮ್ಮ ಅಖಂಡೇಶ್ವರನು. ೧೦

ಶಿವ ಶಿವಾ, ಎನ್ನ ಮನವು ನಿಮ್ಮ ನೆನೆಯಲೊಲ್ಲದೆ
ಅನ್ಯಕ್ಕೆ ಹರಿವುತಿರ್ಪುದು ನೋಡಾ.
ಗುರು ಚರ ಲಿಂಗದ ಸೇವೆಯೆಂದೊಡೆ
ಹಿಂದುಳಿವುತಿರ್ಪುದು ನೋಡಾ.
ಅನ್ಯರ ಒಡವೆಯಾದ ಹೊನ್ನು ಹೆಣ್ಣು ಮಣ್ಣೆಂದೊಡೆ
ಮುಂದುವರಿದು ಓಡುತಿರ್ಪುದು ನೋಡಾ.
ಈ ಮನದ ಉಪಟಳವು ಘನವಾಯಿತ್ತು
ಇನ್ನೇನು ಗತಿಯಯ್ಯ ಎನಗೆ ?

ಅಖಂಡೇಶ್ವರಾ ೧೧

ಹೊರಗೆ ಹೊನ್ನ ಬಿಟ್ಟೆನೆಂದು ನುಡಿವುತಿರ್ಪೆನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು.
ಹೊರಗೆ ಹೆಣ್ಣ ಬಿಟ್ಟೆನೆಂದು ನುಡಿವುತಿರ್ಪನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು.
ಹೊರಗೆ ಮಣ್ಣ ಬಿಟ್ಟೆನೆಂದು ನುಡಿವುತಿರ್ಪೆನಲ್ಲದೆ
ಒಳಗೆ ಬಿಟ್ಟು ನಿಶ್ಚಿಂತನಲ್ಲವಯ್ಯ ನಾನು.
ಇಂತಪ್ಪ ಏಕಾಂತದ್ರೋಹಿ ಗುಪ್ತಪಾತಕಂಗೆ
ಅಖಂಡೇಶ್ವರನು ಒಲಿ ಎಂದೊಡೆ ಎಂತೊಲಿವನಯ್ಯ ಎನಗೆ ? ೧೨

ಬಾಳೆಯ ಎಲೆಯ ಮೇಲೆ ತುಪ್ಪವ ತೊಡೆದಂತೆ
ಒಪ್ಪವಿಟ್ಟು ವಚನವ ನುಡಿದೆನಲ್ಲದೆ

---

೧. ವ್ಯವಹಾರ (ಬ) ೨. ವಾ (ಅ)

ನಡೆಯಲ್ಲಿ ಒಪ್ಪವಿಟ್ಟು ನಡೆಯಲಿಲ್ಲವಯ್ಯ ನಾನು.
ನುಡಿ ಹೀನ ನಡೆ ತಪ್ಪುಗ ಜಡದೇಹಿ ಕಡುಪಾತಕಂಗೆ
ಒಡೆಯ ಅಖಂಡೇಶ್ವರಲಿಂಗವು ಸ್ವಪ್ನದಲ್ಲಿ ಸುಳಿಯಲಿಲ್ಲವಯ್ಯ ಎನಗೆ ! ೧೩

ದುರ್ಗುಣಿ ದುರಾಚಾರಿಯಯ್ಯ ನಾನು.
ದುರ್ಬುದ್ಧಿ ದುರ್ನೀತಿಯುಳ್ಳವನಯ್ಯ ನಾನು.
ದುಷ್ಟಾತ್ಮ ದುಷ್ಕರ್ಮಿಯಯ್ಯ ನಾನು.
ತಿಪ್ಪೆಯ ಕೆದರಿದಂತೆ ಶತಕೋಟಿ ಕೆಟ್ಟ ಗುಣದವನಯ್ಯ ನಾನು.
ಎನ್ನಲ್ಲಿ ಸದ್ಗುಣವನರಸಿದಡೇನು ಹುರುಳಿಲ್ಲವಯ್ಯ
ಮನದಲ್ಲಿ ವಿಕಾರ ಹುಟ್ಟಿ ತನುವನಂಡಲೆದು ವಿಷಯಾತುರನಾಗಿ
ತಲೆಹುಳಿತ ಶ್ವಾನನಂತೆ [೧]ದೆಸೆದೆಸೆಗೆ[೧] ಹರಿದಾಡಿದೆನಲ್ಲದೆ
ನಿಮ್ಮನರಿವುತ್ತ ಬೆರೆವುತ್ತ ಭಕ್ತಿಜ್ಞಾನವೈರಾಗ್ಯದಲ್ಲಿ
ಸುಳಿಯಲಿಲ್ಲವಯ್ಯ ನಾನು.
ಅಖಂಡೇಶ್ವರಾ ೧೪

ಆಸೆವಿಡಿದು ಹಲವು ದೇಶಕ್ಕೆ ಹರಿದಾಡಿದೆನಲ್ಲದೆ
ನಿರಾಸೆವಿಡಿದು ನಿಜವಿರಕ್ತನಾಗಿ ಚರಿಸಲಿಲ್ಲವಯ್ಯ ನಾನು.
ವೇಷಾಡಂಬರದಲ್ಲಿ ಅಧಿಕನೆನಿಸಿ ಲೌಕಿಕ ಮೆಚ್ಚಿ ನಡೆದೆನಲ್ಲದೆ
ಭಾಷೆಯಲ್ಲಿ ಅಧಿಕನೆನಿಸಿ ಲಿಂಗಮೆಚ್ಚಿ ನಡೆಯಲಿಲ್ಲವಯ್ಯ ನಾನು.
ಮಾತಿನಲ್ಲಿ ವಿರಕ್ತನೆಂದು
ಠಕ್ಕುತನದ ಠೌಳುಗಾರಿಕೆಯ ಸುಳ್ಳನೇ ನುಡಿದೆನಲ್ಲದೆ
ಮನದಲ್ಲಿ ಸರ್ವಸಂಗ ಪರಿತ್ಯಾಗಿಯಾದ
ಪರಮ ವಿರಕ್ತನಲ್ಲವಯ್ಯ ನಾನು.
ಇಂತಪ್ಪ ಹುಸಿಹುಂಡ ಹುಸಿಡಂಭಕ ದುರ್ವೃತ್ತಿ ಬರುಕಾಯನಿಗೆ
ಅಖಂಡೇಶ್ವರ ಎಂತು ಮಚ್ಚುವನು ಎನಗೆ ? ೧೫

---

೧. ದೇಶ ದೇಶಕ್ಕೆ (ಅ, ಕ)

ಮನದಲ್ಲಿ ಆಸೆ ಮೊಳೆದೋರಿ ಮತ್ತೆ ಮತ್ತೆ ಬೇಕೆಂಬಲ್ಲಿ
ಎನ್ನ ಮನ ಕಿರಿದಾಯಿತ್ತು.
ನುಡಿಯಲ್ಲಿ ಉಪಾಧಿಕೆ ಮೊಳೆದೋರಿ
ಸರ್ವರನು ಕೊಡು ಕೊಡು ಎಂದು ಬೇಡಿದಲ್ಲಿ
ಎನ್ನ ನುಡಿ ಕಿರಿದಾಯಿತ್ತು.
ಲಿಂಗದ ನೆನಹ ಜಂಗಮದ ಸೇವೆಯ ತೊರೆದು ಅಂಗವಿಕಾರಕ್ಕೆ ಹರಿದಲ್ಲಿ
ಎನ್ನ ನಡೆ ಕಿರಿದಾಯಿತ್ತು.
ಇಂತೀ ತ್ರಿಕರಣ ಶುದ್ಧವಿಲ್ಲದ ಅಬದ್ಧ ಪಾಪಿ ಚಾಂಡಾಲ ದ್ರೋಹಿಗೆ
ಅಖಂಡೇಶ್ವರನು ಎಂತೊಲಿವನೊ ಎನಗೆ ? ೧೬

ಎನ್ನ ತನುವು ನಿಮ್ಮ ಚರಣವ ಪೂಜಿಸಲೊಲ್ಲದೆ
[1]ಹಸಿವುತೃಷೆವಿಷಯದಲ್ಲಿ[1] ಹತವಾಗುತಿರ್ಪುದು ನೋಡಾ.
ಎನ್ನ ಮನವು ನಿಮ್ಮ ದಿವ್ಯನಾಮವ ನೆನೆಯಲೊಲ್ಲದೆ
ಬಿನುಗು ವಿಷಯಕ್ಕೆ ಹರಿಯುತಿರ್ಪುದು ನೋಡಾ.
ಶಿವ ಶಿವಾ, ಈ ತನುಮನದ ದುರ್ಗುಣದ ವರ್ತನೆಯನೇನೆಂಬೆನಯ್ಯ ?
ಹಂದಿ ಹಡಿಕೆಯ ನೆನೆಸಿ ಹಾಳಗೇರಿಗೆ ಹೋಗುವಂತೆ
ಪ್ರಪಂಚಿನತ್ತ ಓಡಾಡುತಿರ್ಪುವಯ್ಯ ಎನ್ನ ದುರ್ಗುಣಂಗಳು.
ಅಖಂಡೇಶ್ವರಾ ೧೭

ತನುವ ನಿಮಗೊಪ್ಪಿಸಿ ತನುಶುದ್ಧ[2]ನಾಗ[2]ಲರಿಯೆನಯ್ಯ ನಾನು.
ಮನವ ನಿಮಗೊಪ್ಪಿಸಿ ಮನಶುದ್ಧ[2]ನಾಗ[2]ಲರಿಯೆನಯ್ಯ ನಾನು.
ಧನವ ನಿಮಗೊಪ್ಪಿಸಿ ಧನಶುದ್ಧ[2]ನಾಗ[2]ಲರಿಯೆನಯ್ಯ ನಾನು.
ಈ ತನುಮನಧನದಲ್ಲಿ ಶುದ್ಧನಲ್ಲದ ಪ್ರಪಂಚಿನ ಡಂಭಕ ನಾನಯ್ಯ.
ಅಖಂಡೇಶ್ವರಾ ೧೮

ತನುವ ಕೊಟ್ಟು ನಿಮ್ಮನೊಲಿ[3]ಸಿಹೆ[3]ನೆಂದಡೆ ಆ ಭಾವವೆನಗೆ ತಿಳಿಯದು.
ಮನವ ಕೊಟ್ಟು ನಿಮ್ಮನೊಲಿಸಿಹೆನೆಂದಡೆ ಆ ಭಾವವೆನಗೆ ತಿಳಿಯದು.

---

೧. ಹಸಿವು ತೃಷೆಯಲ್ಲಿ (ಬ,ಕ,ಡ,ಇ) ೨. ನಾಗ = ನಾಗಿರ (ಅ)
೩. ಸಿಹೆ = ಸೆ (ಅ, ಬ, ಕ)

ಧನವ ಕೊಟ್ಟು ನಿಮ್ಮನೊಲಿಸಿಹೆನೆಂದಡೆ ಆ ಭಾವವೆನಗೆ ತಿಳಿಯದು.
ಸತಿ ಇದ್ದ ಮನೆಗೆ ಪತಿಯೊಲಿದು ಬರುವಂತೆ
[೧]ನೀವೇ[೧] ಒಲಿದು ಬಂದು ಎನ್ನ ತನು ಮನ ಧನದಲ್ಲಿ ಭರಿತನಾಗಯ್ಯ.
ಅಖಂಡೇಶ್ವರಾ ೧೯

ಸತ್ತು ಹುಟ್ಟುವನಲ್ಲ ನೋಡಾ ಮಹೇಶ್ವರನು.
ಹುಟ್ಟಿ ಸಾವವನಲ್ಲ ನೋಡಾ ಮಹೇಶ್ವರನು.
ಇಹಲೋಕದ ಭೋಗವ ಬಯಸುವನಲ್ಲ ನೋಡಾ ಮಹೇಶ್ವರನು.
ಪರಲೋಕದ ಮೋಕ್ಷವ [೨]ಬಯ[೨]ಸುವನಲ್ಲ ನೋಡಾ ಮಹೇಶ್ವರನು.
ಇಹಪರವ ಹೊದ್ದದ ಧೀರನು
ಹಿಂದೆಮುಂದೆಂಬ ದ್ವಂದ್ವಕರ್ಮಂಗಳ ಮೀರಿದ
ವೀರಮಾಹೇಶ್ವರಂಗೆ ನಮೋ ನಮೋ ಎಂಬೆನಯ್ಯ.
ಅಖಂಡೇಶ್ವರಾ ೨೦

ನುಡಿಯಲ್ಲಿ [೩]ಎರಡು[೩] ನುಡಿಯನು; ನಡೆಯಲ್ಲಿ [೩]ಎರಡು[೩] ನಡೆಯನು.
ನುಡಿಯಂತೆ ನಡೆ ವಿಸ್ತರಿಸುವ; ನಡೆಯಂತೆ ನುಡಿ ವಿಸ್ತರಿಸುವ.
ಹಿಡಿವನು ಗುರುಲಿಂಗಜಂಗಮ ದಾಸೋಹವ,
ಬಿಡುವನು ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧದಾಸೆಯ,
ಇಂತಪ್ಪ ವೀರಮಾಹೇಶ್ವರನನೇನೆಂಬೆನಯ್ಯ
ಅಖಂಡೇಶ್ವರಾ ೨೧

[೪]ಹಿಡಿದುದ ಬಿಡುವವ[೪]ನಲ್ಲ; ಬಿಟ್ಟುದ [೫]ಹಿಡಿವವ[೫]ನಲ್ಲ.
ನಡುಮಧ್ಯದಲ್ಲಿ ಬಡತನ ಎಡರು ಕಂಟಕ ಬಂದಲ್ಲಿ[೬]

---

೧ ಸಲೆ (ಅ) ೨. ನೆನೆ (ಕ, ಡ) ೩. ಎರಡಾಗಿ (ಅ)
೪. ಹಿಡಿದುದ ಬಿಡವನಲ್ಲ (ಬ), ಹಿಡಿದು ಬಡುವವನಲ್ಲ (ಇ)
೫. ಪಿಡಿವ (ಬ) ೬. ರೇ (ಅ)

ಕಡುದುಃಖಿಯಾಗಿ ಬಳಲುವವನಲ್ಲ.
ಅಡಿಗಡಿಗೆ ಲಿಂಗಪೂಜೆಯ,
ಅ[೧]ಡಿಗಡಿಗೆ ಜಂಗಮದಾಸೋಹವ [೨]ಮರೆವವ[೨]ನಲ್ಲ.
ಇದು ಕಾರಣ ಅಖಂಡೇಶ್ವರಾ,
ನಿಮ್ಮ ಮಹೇಶ್ವರನ ಚಾರಿತ್ರವು ಇಹಲೋಕದೊಳಗೆಲ್ಲಾ. ೨೨

ಪರಧನ ಪರಸ್ತ್ರೀಯರ ಬಿಟ್ಟಡೆ[೩]
ಗುರು ಲಿಂಗ ಜಂಗಮವು ಸಾಧ್ಯವು ನೋಡಾ.[೩]
ಇಹಪರ ಭೋಗಮೋಕ್ಷದ ಬಯಕೆಯ ಬಿಟ್ಟಡೆ[೩]
ಚರಶೇಷವು ಸಾಧ್ಯವು ನೋಡಾ.
ಕರಣಾದಿ [೪]ಗುಣಂಗಳಿಗೆ[೪] ಹರಿಯದಿರ್ದಡೆ
ಅರುಹು ಸಾಧ್ಯವು ನೋಡಾ.[೩]
ತಾನಿದಿರೆಂಬುಭಯವಳಿದಡೆ[೩]
ನಿಜವು ಸಾಧ್ಯವು ನೋಡಾ.

ಅಖಂಡೇಶ್ವರಾ ೨೪

ಮಾತಿನಲ್ಲಿ ಕರ್ಕಶ, ಮನದಲ್ಲಿ ಘಾತಕತನವುಳ್ಳವನ ಕನಿಷ್ಠನೆಂ[೫]ಬರು.
ಮಾತಿನಲ್ಲಿ [೬]ಲಲ್ಲೆ[೬], ಮನದಲ್ಲಿ ಕತ್ತರಿಯುಳ್ಳವನ ಮಧ್ಯಮನೆಂ[೫]ಬರು.
ಮಾತಿನಲ್ಲಿ ಮೃದು, ಮನದಲ್ಲಿ ಪ್ರೀತಿಯುಳ್ಳವನ
ಉತ್ತಮನೆಂ[೫]ಬರು ನೋಡಾ[೭] ಜಗ[೭]ದವರು.
ಮಾತಿನಲ್ಲಿ ಮಂತ್ರ, ಮನದಲ್ಲಿ [೮]ಮಹಾ[೮]ನುಭಾವ,
ಆತ್ಮದ[೯]ಲ್ಲಿ [೧೦]ಜ್ಯೋತಿಯ[೧೦] ಬೆಳಗುತಿಪ್ಪುದಾಗಿ,
ಉತ್ತಮನಲ್ಲ ಮಧ್ಯಮನಲ್ಲ ಕನಿಷ್ಠನಲ್ಲ ನೋಡಾ
ಅಖಂಡೇಶ್ವರಾ, ನಿಮ್ಮ ಶರಣನು. ೨೫

---

೧. ವ (ಕ), ಅ (ಅ)　೨. ಮರೆವ (ಅ,ಬ,ಕ)　೩. ರೆ (ಅ,ಬ,ಕ)
೪. ಗುಣಂಗಳು (ಅ), ಗುಣಂಗಳ (ಕ)　೫. ರೆ (ಬ), ವೆ (ಕ)　೬. ಲೀಲೆ (ಡ)
೭. ಈ ಜಗ (ಅ)　೮. ಅ (ಅ)　೯. ನ (ಅ, ಕ)　೧೦. ಜ್ಯೋತಿ (ಇ)

ತಾ [೧]ಒಳ್ಳಿಯವ[೧]ನಾದಡೆ* ಸರ್ವರೂ ತನಗೆ
[೧]ಒಳ್ಳಿಯವ[೧]ರಾಗಿರ್ಪರು.
ತಾ ಹೀನನಾದಡೆ* ಸರ್ವರೂ ತನಗೆ ಹೀನರಾಗಿರ್ಪರು.
ತಾ [೧]ಒಳ್ಳಿಯವ[೧]ನಾಗಿ ಸರ್ವರೂ ತನಗೆ ಹೀನರಾದಡೆ*
ಅದು ತನ್ನ ಪೂರ್ವದ ಕರ್ಮ.
ತಾ ಹೀನನಾಗಿ ಸರ್ವರೂ ತನಗೆ [೧]ಒಳ್ಳಿಯವ[೧]ರಾದಡೆ*
ಅದು ತನ್ನ ದೈವದ ಬಲವು ನೋಡಾ!
ಅಖಂಡೇಶ್ವರಾ ೨೫

[೨]ತೊತ್ತಿಂಗೆ[೨] ಒಡತಿಯ ಬಲವಯ್ಯ.
ಬಡವಂಗೆ ಬಲ್ಲಿದನ ಬಲವಯ್ಯ.
ಆಳಿಂಗೆ ಅರಸನ ಬಲವಯ್ಯ.
ನನಗೆ ನಮ್ಮ ಗುರುಲಿಂಗಜಂಗಮದ ಬಲವಯ್ಯ.
ಅಖಂಡೇಶ್ವರಾ ೨೬

ಕಾಯವ ದಂಡಿಸಿ, ಕಂಡ ಕಂಡ [೩]ಕ್ಷೇತ್ರಂಗಳಿಗೆ[೩] ಹೋಗಿ
ತೊಳಲಿ ಬಳಲಿದಡಿ*ಲ್ಲ.
ಜಪ ತಪ ಹೋಮ ನೇಮ ನಿತ್ಯಂಗಳ ಮಾಡಿದಡಿ*ಲ್ಲ.
ಅಶನ ವ[೪]ಸನ ವಿಷಯ ವಿಕಾರಂಗಳ ತೊರೆದಡಿ[೫]ಲ್ಲ.
ಅಖಂಡೇಶ್ವರಾ, ನೀವು ಒಲಿದು ಸಲಹದನ್ನಕ್ಕರ
ಏನು ಮಾಡಿದಡೇ*ನು ಫಲವಿಲ್ಲವಯ್ಯ. ೨೭

ಕನಕ ಕಾಮಿನಿ ಭೂಮಿಗಾಗಿ ಹೊಡೆದಾಡಿ [೬]ಕೆಟ್ಟಿತೀ [೬]ಜಗವೆಲ್ಲ.
ಇದ ಕಂಡು ಕೇಳಿ [೭]ನೀನೇತಕೆ ಇಚ್ಛೈಸುವೆ[೭] ಎಲೆ ಹುಚ್ಚು ಮನವೆ ?
ಹಗಲು[೮] ಕಂಡ ಕಮರಿಯ ಇರುಳ[೯] ಬೀಳುವರೆ ಎಲೆ ಮರುಳು ಮನವೆ?

---

* ರೆ (ಅ) ೧. ವಳ್ಳಿವ (ಅ, ಬ, ಕ, ಡ) ೨. ತೊತ್ತಿಗೆ (ಬ, ಕ, ಇ)
೩. ಕ್ಷೇತ್ರಗಳಿಗೆ(ಡ, ಇ) ೪. ವ್ಯ (ಬ) ೫. ರ (ಅ, ಬ, ಕ, ಡ) ೬. ಕೆಟ್ಟಿತೀ ತ್ರಿ (ಬ), ಕೆಟ್ಟಿತ್ತು(ಅ, ಕ, ಡ), ೭. ನೀನ್ಯಾತಕೆ ಇಚ್ಛೈಸುವೆ(ಬ, ಡ), ನೀನ್ಯೆತಕ್ಕೆ ಇಚ್ಛೈಸುತಿದ್ದೆ(ಕ), ನೀನ್ಯಾತಕ್ಕೆ ಇಚ್ಛೈಸುವೆ (ಅ) ೮. ಲಿ (ಅ, ಬ, ಕ) ೯. ಳಿ (ಅ, ಬ)

ಕೆಡಬೇ[೧]ಡ ಕೆಡಬೇ[೧]ಡ ನಿನಗೊಂದು ಉಪಾಯವ ಹೇಳುವೆ ಕೇಳು
ಎಲೆ ಮರುಳು ಮನವೆ, ಜಗದ [೨]ಆಗುಹೋಗನರಿತು[೨]
ಜಗದೀಶ ಅಖಂಡೇಶ್ವರನ ನೆರೆನಂಬಿದೆಯಾದಡೆ
ನಿನಗೆ ಜನನ ಮರಣಂಗಳು ವಿರಹಿತವಾಗಿ
ಪರಮ ಪದವು ದೊರೆ[೩]ಕೊಂಬುದು ನೋಡಾ! ೨೮

ಅಂದೊಬ್ಬ ದೇವ ಇಂದೊಬ್ಬ ದೇವನೆಂದು
ಸಂದೇಹಗೊಳಬೇಡ ಎಲೆ ಮನವೆ !
ಅಂದು ಕೈಲಾಸದಲ್ಲಿ ಮನುಮುನಿ ದೇವದಾನವರಿಂದೆ
[೪]ಓಲಗವ[೪] ಕೊಂಬ ದೇವ
ಇಂದು ಎನ್ನ ಕರಸ್ಥಲದ*ಲ್ಲಿದ್ದಾನೆ* ಇಲ್ಲಿಯೆ ನೋಡು ಎಲೆ ಮನವೆ.
ಅಂದು ಚೋಳಾದಿಗೊಲಿದ ದೇವ
ಇಂದು ಎನ್ನ ಕರಸ್ಥಲದ*ಲ್ಲಿದ್ದಾನೆ* ಇಲ್ಲಿಯೆ ನೋಡು ಎಲೆ ಮನವೆ.
ಅಂದು ಅರವತ್ತುಮೂರು ಪುರಾತನರಿಗೊಲಿದು
[೫]ಶಾಂಭವ[೫]ಪುರಕ್ಕೊಯ್ದ ದೇವ
ಇಂದು ಎನ್ನ ಕರಸ್ಥಲದ*ಲ್ಲಿದ್ದಾನೆ* ಇಲ್ಲಿಯೆ ನೋಡು ಎಲೆ ಮನವೆ.
ಅಂದು ಬಸವಣ್ಣ ಮೊದಲಾದ ಅಸಂಖ್ಯಾತ ಪ್ರಮಥಗಣಂಗಳ
ತನ್ನೊಳಗೆ ಗರ್ಭೀಕರಿಸಿಕೊಂಡ ದೇವ
ಇಂದು ಎನ್ನ ಕರಸ್ಥಲದ*ಲ್ಲಿದ್ದಾನೆ* ಇಲ್ಲಿಯೆ ನೋಡು ಎಲೆ ಮನವೆ.
ಎನ್ನ ಕರಸ್ಥಲದಲ್ಲಿ ಮೂರ್ತಿಗೊಂಡು ಬೆಳಗುವ
ಪರಶಿವನ ನಂಬಿ ನಿಶ್ಚಯಿಸಿಕೊಂಡೆಯಾದಡೆ
ನಮ್ಮ ಅಖಂಡೇಶ್ವರಲಿಂಗದಲ್ಲಿ
ನಿನ್ನಿಂದ ಬಿಟ್ಟು ಸುಖಿಗಳಾರಿಲ್ಲ ನೋಡಾ ಎಲೆ ಮನವೆ. ೨೯

---

೧. ಬ್ಯಾ (ಅ,ಬ,ಕ), ೨. ಆಗು ಚಾಗವನು ಹೋಗದೆ (ಅ), ಆಗು ಚಗುವನು ಹೋಗದೆ (ಬ), ಲಿಂಗ ಭೋಗವನು ಹೋಗದೆ (ಡ) ೩. ರ (ಅ, ಬ, ಕ) ೪. ವಾಲಗ (ಅ,ಬ,ಕ) * ಲೈದಾನೆ (ಅ,ಬ,ಕ) ೫. ಶಾಂಭು (ಅ), ಶಂಭು (ಕ,ಡ)

ನೋಡಬಾರದು ಪರಸತಿಯರ.
ಮಾಡಬಾರದು ಸುಗುಣವಿಲ್ಲದವರಿಗುಪಚಾರವ.
ಬೇಡಬಾರದು ಸದ್‌ಭಕ್ತರಲ್ಲದವರ.
ಹಾಡಬಾರದು ಶಿವನಲ್ಲದೆ ಅನ್ಯ ದೈವಂಗಳ.
ಅದೇನು ಕಾರಣವೆಂದೊಡೆ :
ಮುಂದೆ ಭವಬಂಧನದ [೧]ತೊಡಕು ಉಂಟಾದ[೧] ಕಾರಣ.
ಅಖಂಡೇಶ್ವರಾ, ನಿಮ್ಮನಲ್ಲದೆ ಅನ್ಯವನರಿಯದಂತೆ ಮಾಡು ಎನ್ನ.
ನಿಮ್ಮ ನಾ[೨] ಬೇಡಿಕೊಂಬೆನು. ೩೦

ನೋಟ ಭಂಗ ಪರಸತಿಯರ.
ಬೇಟ ಭಂಗ ಪರಸತಿಯರ.
ಕೂಟ ಭಂಗ ಪರಸತಿಯರ.
ಅದೇನು ಕಾರಣವೆಂದೊಡೆ :
ಮುನ್ನ ಅರಿಯದೆ ಕೆಟ್ಟರು ಕೀಚಕ ರಾವಣ ದೇವೇಂದ್ರರು.
ಇನ್ನು ಬಯಸುವವರಿಗೆ ಅದೇ ವಿಧಿ ನೋಡಾ!
ಅಖಂಡೇಶ್ವರಾ. ೩೧

ಇಂದ್ರಿಯಂಗಳಿಚ್ಛೆಯಲ್ಲಿ ಇರಿಸದಿರಯ್ಯ ಎನ್ನ.
ಕರಣಂಗಳ ಕತ್ತಲೆಯಲ್ಲಿ ಕೆಡಹದಿರಯ್ಯ ಎನ್ನ.
ಕಾಯಜೀವ ಸಂಸಾರದಲ್ಲಿ ಕಳವಳಿಸಿ ಮುಂದುಗೆಡಿಸದಿರಯ್ಯ ಎನ್ನ.
ಮನದ ಮರವೆಯಲ್ಲಿ ಸುಳಿಸದಿರಯ್ಯ ಎನ್ನ.
ಭಾವದ ಭ್ರಮೆಯಲ್ಲಿ ಬಳಲಿಸದಿರಯ್ಯ ಎನ್ನ.
ಅಖಂಡೇಶ್ವರಾ, ನಿಮ್ಮ ನಾ ಸೆರಗೊಡ್ಡಿ ಬೇಡಿಕೊಂಬೆನು.[೩] ೩೨

ಗುರುಹರ ವಚನ ಪ್ರಮಾಣದಿಂದೆ ಹಿಡಿದ
ವ್ರತಶೀಲನೇಮಂಗಳ ಕಡೆತನಕ ಬಿಡದಿರಬೇಕು.

---

೧. ತೊಡಕಾದ (ಅ) ೨. ನ (ಅ, ಬ)
೩. ನಯ್ಯಾ (ಅ), ಬುವೆ (ಕ)

ಜಾತಿ ವರ್ಣ ಆಶ್ರಮ ಕುಲ ಗೋತ್ರಂಗಳೆಂಬ
ತನ್ನ ಪೂರ್ವಾಶ್ರಯ ಪದ್ಧತಿಯ ಮರೆಯಬೇಕು.
ಇಂದಿಗೆ ಬೇಕು ನಾಳಿಗೆ ಬೇಕೆಂಬ
[1]ಆಸೆಯಾಮಿಷವ[1] ಜರೆಯಬೇಕು.
ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ
ಮಲತ್ರಯಂಗಳ ಬಲೆಯ ಹರಿಯಬೇಕು.
ಅರುಹು ಆಚಾರ ಸತ್‌ಕ್ರಿಯಾಸಂಪನ್ನನಾಗಿರಬೇಕು.
ಇಂತೀ ವರ್ಮವನರಿಯದೆ ಬರಿ[2]ದೆ ದೇವಭಕ್ತರೆನಿಸಿಕೊಂಬ
ಭವಪಾತಕರ ಎನಗೊಮ್ಮೆ ತೋರದಿರಯ್ಯ.

ಅಖಂಡೇಶ್ವರಾ. ೩೩

ಎನ್ನ ಜನನ ಮರಣಂಗಳೆಲ್ಲ ಜಾರಿಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಪುಣ್ಯ ಪಾಪಂಗಳೆಲ್ಲ ಪಲ್ಲಟವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಕಾಲ ಕಲ್ಪಿತಂಗಳೆಲ್ಲ ಕರಗಿ ಹೋದುವಯ್ಯಾ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಪಂಚೇಂದ್ರಿಯ ಸಪ್ತವ್ಯಸನಂಗಳೆಲ್ಲ ಸಣ್ಣಿಸಿ ಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಅಷ್ಟಮದ ಅರಿಷಡ್ವರ್ಗಂಗಳೆಲ್ಲ ನಷ್ಟವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ತನುಕರಣೇಂದ್ರಿಯಂಗಳೆಲ್ಲ ತರಹರವಾದುವಯ್ಯ
ನಿಮ್ಮ ನೆನಹಿನ ಬಲದಿಂದೆ.
ಎನ್ನ ಮನ ಪ್ರಾಣ ಭಾವಂಗಳೆಲ್ಲ ಬರಿ[3]ದಾಗಿ ಹೋದುವಯ್ಯ
ನಿಮ್ಮ ನೆನಹಿನ ಬಲದಿಂದೆ.

ಅಖಂಡೇಶ್ವರಾ. ೩೪

---

೧. ಆಸೆಯ (ಅ, ಕ), ಆಸೆಯುವ (ಬ)  ೨. ರು (ಅ)  ೩. ರು (ಅ, ಬ)

ಎನ್ನ ಕರಕಮಲಮಧ್ಯದಲ್ಲಿ ಪರಮಶಿವಲಿಂಗವ ತುಂಬಿ
ಆ ಲಿಂಗದ ಮಧ್ಯದಲ್ಲಿ ಕಂಗಳ ತುಂಬಿ
ಆ ಕಂಗಳ ಮಧ್ಯದಲ್ಲಿ ಮನವ ತುಂಬಿ
ಆ ಮನದ ಮಧ್ಯದಲ್ಲಿ ಭಾವವ ತುಂಬಿ
ಪರವಶ[1]ನಾಗಿರ್ದೆನಯ್ಯ ನಿಮ್ಮೊಳಗೆ.
ಅಖಂಡೇಶ್ವರಾ. ೩೫

ಪ್ರಾಣವು ಲಿಂಗವ ನುಂಗಿತ್ತೋ, ಲಿಂಗವು ಪ್ರಾಣವ ನುಂಗಿತ್ತೋ ಎಂದರಿಯೆನಯ್ಯ.
ಭಾವವು ಲಿಂಗದಲ್ಲಿ ತುಂಬಿತ್ತೋ, ಲಿಂಗವು ಭಾವದಲ್ಲಿ ತುಂಬಿತ್ತೋ ಎಂದರಿಯೆನಯ್ಯ.
ಮನವು ಲಿಂಗದಲ್ಲಿ ಮುಳುಗಿತ್ತೋ, ಲಿಂಗವು ಮನದಲ್ಲಿ ಮುಳುಗಿತ್ತೋ ಎಂದರಿಯೆನಯ್ಯ.
ಅಖಂಡೇಶ್ವರಾ, ನಿಮ್ಮ ಕೂಡುವ [2]ಅವಿರಳಾವಸ್ಥೆ[2]ಯಲ್ಲಿ
[3]ಏನೇನೂ[3] ಅರಿಯದಿರ್ದೆನಯ್ಯ! ೩೬

ಘನತರದಿಷ್ಟಲಿಂಗದಲ್ಲಿ ಅನಿ[4]ಮಿಷದೃಷ್ಟಿ ಬಲಿದು,
ಮನ ಕರಗಿ, ತನು ಉಬ್ಬಿ, ಹೃದಯಕಮಲ ಪಸರಿಸಿ,
ಸರ್ವಾಂಗವು ಗುಡಿಗಟ್ಟಿ ಕಂಗಳಲ್ಲಿ
[5]ಪರಿಣಾಮಜಲ ಉಕ್ಕಿ[5] ಹೊರಸೂಸುತ್ತ
ಪರಮ ಕಾಷ್ಟೆಯಂತೆ, ಚಿತ್ರದ ರೂಹಿನಂತೆ
ಪರಬ್ರಹ್ಮಲಿಂಗದಲ್ಲಿ ಬೆರೆದು ಪರವಶಗೊಂಡಿರ್ಪ
ಮಹಾ ಶರಣರ ತೋರಿ ಬದುಕಿಸಯ್ಯ ಎನ್ನ.
ಅಖಂಡೇಶ್ವರಾ. ೩೭

---

೧. ಸ (ಅ)   ೨. ವಿಕಳಾವಸ್ಥೆ(ಅ, ಬ), ವಿಕಾರವಸ್ಥೆ (ಕ)
೩. ಏನು ಏನು (ಅ, ಕ)   ೪. ನು (ಅ, ಕ)   ೫. ಪರಿಣಾಮಸ್ವರೂಪವಾದ ಕರುಣ ಜಲ, ವಿನಯ ಜಲ ಸಮತಾಜಲವು, ಬುಡುಗೋಡಿ ನಡುಗೋಡಿ ಕಡೆ ಗೋಡಿಯಲ್ಲಿ ಉಕ್ಕಿ (ಅ)

ಬೇಕೆಂಬ[೧]ನಲ್ಲ[೧]ವಯ್ಯ ನಿಮ್ಮ ಶರಣ.
ಬೇಡೆಂಬ[೧]ನಲ್ಲ[೧]ವಯ್ಯ ನಿಮ್ಮ ಶರಣ.
ಲೋಕದ ನಡೆಯಂತೆ ನಡೆ[೨]ಯನಯ್ಯ[೨] ನಿಮ್ಮ ಶರಣ.
ಲೋಕದ ನುಡಿಯಂತೆ ನುಡಿ[೨]ಯನಯ್ಯ[೨] ನಿಮ್ಮ ಶರಣ.
ಕಾಕುನುಡಿ ಸಟೆ ಕುಟಿಲ ಕುಹಕ ವ್ಯಾಪಾರವ ಹೊದ್ದನಯ್ಯ ನಿಮ್ಮ ಶರಣ.
ಏಕಲಿಂಗನಿಷ್ಠಾಪರನಾಗಿ ಆವಾವ ಪ್ರಪಂಚವನರಿಯನಯ್ಯ ನಿಮ್ಮ ಶರಣ.
ಅಖಂಡೇಶ್ವರಾ. ೩೮

ನಿಮ್ಮ ನೋಡಿನೋಡಿ ಎನ್ನ ಕಂಗಳು ದಣಿಯವಯ್ಯ.
ನಿಮ್ಮ ಹಾಡಿಹಾಡಿ ಎನ್ನ ಜಿಹ್ವೆ ದಣಿಯದಯ್ಯ.
ನಿಮ್ಮ ಪೂಜೆಯ ಮಾಡಿಮಾಡಿ ಎನ್ನ ಕೈಗಳು ದಣಿಯವಯ್ಯ.
ನಿಮ್ಮ ನೆನೆನೆನೆದು ಎನ್ನ ಮನವು ದಣಿಯದಯ್ಯ.
ಅಖಂಡೇಶ್ವರಾ. ೩೯

ಎನ್ನ ಕಂಗಳು ನಿಮ್ಮ ನೋಡಲಿಚ್ಛೈಸುತಿರ್ಪುವು.
ಎನ್ನ ಮನವು ನಿಮ್ಮ ನೆನಹ [೩]ಹಾರೈಸುತಿರ್ಪುದು.
ಎನ್ನ ಭಾವವು ನಿಮ್ಮ ಬಯಕೆಯ ಬಯಸುತಿರ್ಪುದಯ್ಯ.
ಅಖಂಡೇಶ್ವರಾ. ೪೦

ನಾನಾ ವರ್ಣದ ಕಾಷ್ಠವ ಸುಟ್ಟಲ್ಲಿ ಏಕ ವರ್ಣದ ಬೂದಿಯಪ್ಪುದಲ್ಲದೆ
ಆ [೪]ಕಾಷ್ಠದ ಕುಲ ಉಂಟೇ ಅಯ್ಯ ?
ತೊಟ್ಟು ಬಿಟ್ಟ ಹಣ್ಣು ಮರಳಿ ತೊಟ್ಟ ಹತ್ತಬಲ್ಲುದೇ ಅಯ್ಯ ?
ಕಷ್ಟಜನ್ಮದಲ್ಲಿ ಹುಟ್ಟಿದಾತನಾದಡಾಗಲಿ
ನೆಟ್ಟನೆ ಶ್ರೀಗುರುಕಾರುಣ್ಯವ ಪಡೆದು, ಇಷ್ಟಲಿಂಗಸಂಬಂಧಿಯಾಗಿ,
ಆಚಾರ ಕ್ರಿಯಾಸಂಪನ್ನನಾದ ಶರಣನ

---

೧. ವನಲ್ಲ (ಅ, ಕ, ಡ)  ೨. ವವನಲ್ಲವಯ್ಯಾ (ಅ)
೩. ವ (ಅ)  ೪. ಅಲ್ಲಿ (ಅ, ಕ)

ಜಾತಿಪೂರ್ವವ ಎತ್ತಿ ದೂಷಿಸುವ ಪಾತಕರ ಬಾಯಲ್ಲಿ
[೧]ಬಾಲಹುಳುಗಳು[೧] ಸುರಿಯದೆ ಮಾಣ್ಬವೆ ಹೇಳಾ ?

ಅಖಂಡೇಶ್ವರಾ. ೪೧

ನೀರು ಘಟ್ಟಿಗೊಂಡು ಮುತ್ತಪ್ಪುದಲ್ಲದೆ ಮುತ್ತು ನೀರಪ್ಪುದೇ ಅಯ್ಯ?
ಹಾಲು ಹೆಪ್ಪುಗೊಂಡು ತುಪ್ಪವಪ್ಪುದಲ್ಲದೆ ತುಪ್ಪ ಹಾಲಪ್ಪುದೇ ಅಯ್ಯ?
ಹೀನ ಜಾತಿಯಲ್ಲಿ ಜನಿಸಿದ [೨]ನರರನು[೨]
ಗುರುವಿನ ಕಾರುಣ್ಯದಿಂದ ಶಿವಜಾ[೩]ತ ಶರಣ[೩]ನಾದ ಬಳಿಕ
ಮರಳಿ ನರ[೪]ನಪ್ಪು[೪]ನೇ ಅಯ್ಯ?

ಅಖಂಡೇಶ್ವರಾ. ೪೨

ಜಾತಿ ಪೂರ್ವಾಶ್ರಯವ ಕಳದು, ಸೂತಕ ಪಾತಕಂಗಳನಳಿದು,
ಅಂಗತ್ರಯಗಳಲ್ಲಿ ಮುಸುಕಿದ ಅಜ್ಞಾನ ತಾಮಸವ ಜರಿದು,
ಲಿಂಗತ್ರಯಂಗಳ ಸಂಗ ಸಮರಸವನರಿದ ಶರಣಂಗೆ
[೫]ಉತ್ಪತ್ತಿ[೫]-ಸ್ಥಿತಿ-ಲಯಂಗಳಿಲ್ಲ ನೋಡಾ!
ಅದೇನು ಕಾರಣವೆಂದೊಡೆ :
ಇಷ್ಟಲಿಂಗದಲ್ಲಿ [೫]ಉತ್ಪತ್ತಿ[೫], ಪ್ರಾಣಲಿಂಗದಲ್ಲಿ ರಕ್ಷಣ್ಯ,
ಭಾವಲಿಂಗದಲ್ಲಿ ಬಯಲನೈದಿದ ಮಹಾ ಶರಣಂಗೆ
ಹುಟ್ಟುಹೊಂದುಗಳು ನಷ್ಟವಾದುವಯ್ಯ!

ಅಖಂಡೇಶ್ವರಾ. ೪೩

ತನು ಲಿಂಗವಾದ ಶರಣಂಗೆ ತಾಪತ್ರಯಂಗಳಿಲ್ಲ.
ಮನ ಲಿಂಗವಾದ ಶರಣಂಗೆ ಮಾಯಾವಾಸನಂಗಳಿಲ್ಲ.
ಪ್ರಾಣ ಲಿಂಗವಾದ ಶರಣಂಗೆ ಪ್ರಪಂಚಿನ ಕುರುಹಿಲ್ಲ.
ಸರ್ವಾಂಗಲಿಂಗವಾದ ಶರಣಂಗೆ ಗರ್ವ ಅಹಂಕಾರವಿಲ್ಲ ನೋಡಾ!

ಅಖಂಡೇಶ್ವರಾ. ೪೪

---

೧. ಬಾಲಪುಳು (ಅ,ಬ,ಕ) ೨. ವನಾದಡು (ಅ), ಮಾನವನು (ಕ)
೩. ತಾಭರಣ (ಡ) ೪. ನಪ್ಪುವ (ಅ) ೫. ಉತ್ಪತ್ಯ (ಅ, ಬ, ಕ)

ಎನ್ನ ಜನನಸೂತಕ ಹೋಯಿತ್ತು
ಶ್ರೀ ಗುರುವಿನ ಪಾಣಿಪದ್ಮದಲ್ಲಿ ಜನಿಸಿದೆನಾಗಿ.
ಎನ್ನ ಜಾತಿಸೂತಕ ಹೋಯಿತ್ತು ಅಜಾತ ಲಿಂಗಸಂಗದಿಂದ.
ಎನ್ನ ಕುಲಸೂತಕ ಹೋಯಿತ್ತು ಶಿವನಲ್ಲದೆ ಅನ್ಯದೈವವನರಿಯೆನಾಗಿ.
ಎನ್ನ ಛಲಸೂತಕ ಹೋಯಿತ್ತು ಜೀವಭಾವವಿಲ್ಲವಾಗಿ.
ಎನ್ನ ಮನಸೂತಕ ಹೋಯಿತ್ತು ನಿಮ್ಮ ನಾಮವ ನೆನೆನೆನೆದು.
ಎನ್ನ ಕಂಗಳ ಸೂತಕ ಹೋಯಿತ್ತು
ನಿಮ್ಮ ಮಂಗಳ ಸ್ವರೂಪವ ನೋಡಿನೋಡಿ.
ಎನ್ನ ಕೈಯ್ಯ ಸೂತಕ ಹೋಯಿತ್ತು ನಿಮ್ಮ ಮುಟ್ಟಿ ಪೂಜಿಸಿಪೂಜಿಸಿ.
ಎನ್ನ ಕಿವಿಯ ಸೂತಕ ಹೋಯಿತ್ತು ನಿಮ್ಮ ಕೀರ್ತಿಯ ಕೇಳಿಕೇಳಿ.
ಎನ್ನ ಜಿಹ್ವೆಯ ಸೂತಕ ಹೋಯಿತ್ತು
ನಿಮ್ಮ ಪರಮ ಪ್ರಸಾದವ ಸವಿಸವಿದು.
ಇಂತೀ ಸರ್ವಸೂತಕವ ಹರಿದು, ಪೂರ್ವ ಕಲ್ಪಿತಂಗಳ ಮೀರಿ,
ನಿಮ್ಮೊಳಗೆ ನಿಜ ನಿಶ್ಚಿಂತನಿವಾಸಿಯಾಗಿರ್ದೆನಯ್ಯ.

ಅಖಂಡೇಶ್ವರಾ. ೪೫

ಆಚಾರ ವಿಚಾರವೆಂದರಿಯರು.
ಅಂತರಂಗ ಬಹಿರಂಗವೆಂದರಿಯರು.
ಸತ್‌ಕ್ರಿಯೆ ಸಮ್ಯಕ್ ಜ್ಞಾನವೆಂದರಿಯರು.
ಕಾಯಜೀವದ ಕರ್ಮಕತ್ತಲೆಯಲ್ಲಿ ಬಿದ್ದು
ಕರಣಮಥನಕರ್ಕಶದಿಂದೆ ಹೊಡೆದಾಡಿ ಹೊತ್ತುಗಳೆದು
ಹೊಲಬುದಪ್ಪಿ ಸತ್ತುಹೋಗುವ ವ್ಯರ್ಥ ಜೀವಿಗಳ
ಭಕ್ತಮಾಹೇಶ್ವರರೆಂದಡೆ ಭವ ಹಿಂಗದಯ್ಯ.

ಅಖಂಡೇಶ್ವರಾ. ೪೬

ನುಡಿಯಲಾಗದು ನುಡಿಯಲಾಗದು ನಯನುಡಿಯಿಲ್ಲದವರೊಡನೆ.
ನುಡಿಯಲಾಗದು ನುಡಿಯಲಾಗದು ದಯಗುಣವಿಲ್ಲದವರೊಡನೆ.
ನುಡಿಯಲಾಗದು ನುಡಿಯಲಾಗದು ಭಯಭಕ್ತಿಯಿಲ್ಲದವರೊಡನೆ.

ನುಡಿಯಲಾಗದು ನುಡಿಯಲಾಗದು ಸ್ವಯಜ್ಞಾನ
ವಿಲ್ಲದವರೊಡನೆ ಶಿವಾನುಭಾವವ !
ಅದೇನು ಕಾರಣವೆಂದೊಡೆ :
ತನ್ನ ಅರುಹಿಂಗೆ ಹಾನಿ, ಮಹಾ ಪರಿಣಾಮ ಕೆಡುವುದು.
ಇದು ಕಾರಣ ಕಡುಪಾತಕ ಜಡಜೀವಿಗಳೊಡನೆ
ಲಕ್ಷಕ್ಕೊಮ್ಮೆ ಕೋಟಿಗೊಂ[1]ದು[1] ವೇಳೆಯಾದಡೂ ನುಡಿಯಲಾಗದಯ್ಯ.
ಅಖಂಡೇಶ್ವರಾ. ೪೭

ನುಡಿಯಬೇಕು ಸತ್ಯ ಸದಾಚಾರವುಳ್ಳವರೊಡನೆ ಅನುಭಾವವ.
ನುಡಿಯಬೇಕು ಭಕ್ತಿ ಯುಕ್ತಿ ಮುಕ್ತಿಯುಳ್ಳವರೊಡನೆ ಅನುಭಾವವ.
ನುಡಿಯಬೇಕು ಸಾಧು ಸಜ್ಜನ ಸದ್ಭಕ್ತ ಶರಣ[2]ರೊಡನೆ[2] ಅನುಭಾವವ.
ನುಡಿಯಬೇಕು ನಮ್ಮ ಅಖಂಡೇಶ್ವರಲಿಂಗವ
ಕೂಡಬೇಕೆಂಬ ಬಯಕೆಯುಳ್ಳವರೊಡನೆ [3]ಶಿವಾ[3]ನುಭಾವವ. ೪೮

ಇಷ್ಟಲಿಂಗದಲ್ಲಿ ನೈಷ್ಠೆ ಬಲಿಯರು.
ಪ್ರಾಣಲಿಂಗದಲ್ಲಿ ಪ್ರತಿಷ್ಠೆಯನರಿಯರು.
ಬರಿದೆ ಇಷ್ಟಲಿಂಗಸಂಬಂಧವ ಪ್ರಾಣಲಿಂಗದ ನಿರ್ದೇಶವ ಬಲ್ಲೆವೆಂಬ
ಭ್ರಷ್ಟರನೇನೆಂಬೆನಯ್ಯ?
ಅಖಂಡೇಶ್ವರಾ. ೪೯

ಇಷ್ಟಲಿಂಗದ ನಿಜವನರಿಯದೆ ಪ್ರಾಣಲಿಂಗದ ಮಾತನುಡಿವ
ನೀತಿಹೀನರ ನಾನೇನೆಂಬೆನಯ್ಯ?
ಹೆತ್ತ ತಂದೆಯನರಿಯದೆ ಮುತ್ತಾತ್ಯನ ಪ್ರತಾಪವ ಹೇಳುವ
ಕತ್ತೆ ಮೂಳರನೇನೆಂಬೆನಯ್ಯ?
ಅಖಂಡೇಶ್ವರಾ. ೫೦

---

೧. ಮೆ ಒಂದು ೨. ಶರಣಜನಂಗಳೊಡನೆ (ಅ), ಶರಣರುಗಳೊಡನೆ (ಬ), ಗಣಂಗಳೊಡನೆ (ಕ) ೩. ಅ (ಬ, ಕ)

ಇಷ್ಟಲಿಂಗ ಪ್ರಾಣಲಿಂಗ ಒಂದೇಯೆಂದರಿಯದೆ
ಭಿನ್ನವಿಟ್ಟು ನುಡಿವ ಭ್ರಾಂತರ ಮಾತ ಕೇಳಲಾಗದು.
ಅದೇನು ಕಾರಣವೆಂದೊಡೆ :
ತಿಳಿದುಪ್ಪ ಗಟ್ಟಿಗೊಂಡು ಹೆರೆದುಪ್ಪವಾದಂತೆ
ನಿರಾಕಾರ ಪರಬ್ರಹ್ಮವ ಸಾಕಾರಗೊಳಿಸಿ
ಶ್ರೀಗುರುಸ್ವಾಮಿ ಕರುಣಿಸಿ
ಕರಸ್ಥಲಕ್ಕೆ ಇಷ್ಟಲಿಂಗವೆನಿಸಿ ಕೊಟ್ಟ ಬಳಿಕ
ಆ ಲಿಂಗದಲ್ಲಿ ೧ನಿಷ್ಠೆ೧ ಬಲಿಯಲು
ಬಾಹ್ಯ ಕರಣಂಗಳು ತರಹರವಾಗಿ
ಆ ಲಿಂಗದ ಚಿತ್‌ಕಳೆ ದೃಷ್ಟಿಸೂತ್ರದಿಂದೆ
೨ತನ್ನ ಅಂತರಂಗಕ್ಕೆ೨ ವೇಧಿಸಿ ಪ್ರಾಣಲಿಂಗವೆನಿಸುವುದು.
ಸ್ಫಟಿಕದ ಘಟ್ಟದಲ್ಲಿರಿಸಿದ ಜ್ಯೋತಿಯಂತೆ
ಒಳಹೊರಗೆ ತೋರುತಿರ್ಪುದು ಒಂದೇ ಲಿಂಗವೆಂದರಿಯದೆ
ಭ್ರಾಂತಿಜ್ಞಾನದಿಂದೆ
ಅಂತರಂಗದಲ್ಲಿ ಬೇರೆ ಪ್ರಾಣಲಿಂಗವುಂಟೆಂದು
ಇಷ್ಟಲಿಂಗದಲ್ಲಿ ಅವಿಶ್ವಾಸಮಾಡುವ
ಭ್ರಷ್ಟಭವಿಗಳ ಮುಖವ ನೋಡಲಾಗದಯ್ಯ.

ಅಖಂಡೇಶ್ವರಾ. ೫೧

ಕಾಷ್ಠದಲ್ಲಿ ಅಗ್ನಿ ಉಂಟೆಂದಡೆ
ಕಾಷ್ಠದ ರೂಪು ಸುಡಲರಿಯದು ನೋಡಾ !
ದೇಹ ಮಧ್ಯದಲ್ಲಿ ಪರವಸ್ತು ಉಂಟೆಂದಡೆ
ಹರಿಯದು ನೋಡಾ ಆ ದೇಹದ ಜಡಭಾವ !
ಅದೆಂತೆಂದೊಡೆ :
ಆ ಕಾಷ್ಠದ ಮಧ್ಯದಲ್ಲಿ ಅಡಗಿರ್ದ ಮಂದಾಗ್ನಿ
ಮಥನದಿಂದೆ ಬಹಿಷ್ಕರಿಸಿ ಆ ಕಾಷ್ಠವ ಸುಡುವಂತೆ

---

೧. ನೈಷ್ಠೆ (ಅ, ಕ)  ೨. ಆರಂಗ (ಅ)

ದೇಹದ ಮಧ್ಯದಲ್ಲಿ ಅಡಗಿರ್ದ ಪರವಸ್ತುವನು
ಶ್ರೀಗುರುಸ್ವಾಮಿ ತನ್ನ ಕ್ರಿಯಾಶಕ್ತಿಯ ಮಥನದಿಂದೆ ಬಹಿಷ್ಕರಿಸಿ
ಬಹಿರಂಗದ ಮೇಲೆ ಇಷ್ಟಲಿಂಗವಾಗಿ ಧರಿಸಲು
ಆ ಲಿಂಗದ ಸತ್‌ಕ್ರಿಯಾ ಪೂಜೆಯಿಂದೆ
ಸ್ಥೂಲಾಂಗದ ಕಾಷ್ಠಗುಣ ಧರ್ಮಂಗಳೆಲ್ಲ ನಷ್ಟವಾಗಿ
ಆ ಲಿಂಗದ ಚಿತ್ಕಳೆಯು ಸರ್ವಾಂಗಕ್ಕೆ ವೇಧಿಸಿ
ಅಂತರಂಗ ಬಹಿರಂಗವೊಂದಾಗಿ
ಆತ್ಮನ ಅಹಂ ಮಮತೆ ಕೆಟ್ಟು
ಶಿಖಿಕರ್ಪುರ ಸಂಯೋಗದಂತೆ ಪರತತ್ತ್ವವನೊಡಗೂಡಿದ
ಮಹಾತ್ಮನ ಕಾಯ ನಿರವಯಲಪ್ಪುದಲ್ಲದೆ
೧ಬರಿಯ೧ ಒಣವಾಗದ್ವೈತದಿಂದೆ ಅಹಂ ಬ್ರಹ್ಮವೆಂದು ನುಡಿದು
ದೇಹಪ್ರಾಣಂಗಳ ಪ್ರಕೃತಿವರ್ತನೆಯಲ್ಲಿ ನಡೆದು ನಿತ್ಯರಾದೆವೆಂಬುವರೆಲ್ಲ
ಭವಾಂಬುಧಿಯಲ್ಲಿ ಬಿದ್ದು ಮುಳುಗುತ್ತೇಳುತ್ತ
ತಡಿಯ ಸೇರಲರಿಯದೆ ಕೆಟ್ಟು ಹೋದರು ನೋಡಾ !

ಅಖಂಡೇಶ್ವರಾ. ೫೨

ಪರಾತ್ಪರವಾದ ಪರಶಿವಬ್ರಹ್ಮವನೊಡಗೂಡುವ
ಅವಿರಳ ಸಮರಸ ಭಕ್ತಿಯಿಲ್ಲದೆ
ನಾನು ಬ್ರಹ್ಮವು ತಾನು ಬ್ರಹ್ಮವು ಎಂದು
ಪರಬ್ರಹ್ಮದ ನಿಲವನರಿಯದೆ
ಕೆಟ್ಟರು ನೋಡಾ ಹಲಬರು ಕೆಲಬರು !
ಅವರಾರೆಂದೊಡೆ :
ಅಹಂ ಬ್ರಹ್ಮವೆಂದು ನುಡಿದ
ಸನತ್ಕುಮಾರಂಗೆ ಒಂಟೆ ೨ವಿಧಿ೨ಯಾಯಿತ್ತು.

---

೧. ಬರುದೆ (ಅ), ಬರಿದೆ (ಬ, ಕ)
೨. ಇದಿ (ಅ)

ಅಹಂ ಬ್ರಹ್ಮವೆಂದು ನುಡಿದ
ಹರಿವಿರಿಂಚಿಗಳಿಗೆ ಭವಬಂಧನವಾಯಿತ್ತು.
ಅಹಂ ಬ್ರಹ್ಮವೆಂದು ನುಡಿದ
ಇಂದ್ರಚಂದ್ರರಿಗೆ ಅಂಗದ ಕೊರತೆಯಾಯಿತ್ತು.
ಅಹಂ ಬ್ರಹ್ಮವೆಂದು ನುಡಿದ
ಮನುಮುನಿಗಳಿಗೆಲ್ಲ ಮರಣವಾಯಿತ್ತು.
ಇದನರಿತು[೧] ಹಮ್ಮು ಬಿಮ್ಮುವನಳಿದು, ಹೆಮ್ಮೆ [೨]ಹಿರಿ[೨]ತನವ ನೀಗಿ
ಪರಬ್ರಹ್ಮವನೊಡಗೂಡಿ
ಸುಖಿಯಾಗಿರ್ಪರಯ್ಯ ನಿಮ್ಮ ಶರಣರು!

ಅಖಂಡೇಶ್ವರಾ. ೫೩

ಕ್ರೀಯ್ಯವೇ ಅಧಿಕವೆಂಬ
ಗೊಡ್ಡು[೩] ಸಿದ್ಧಾಂತಿಗಳ ಮಾತು ಸೊಗಸದಯ್ಯಾ ಎನಗೆ.
ಜ್ಞಾನವೇ ಅಧಿಕವೆಂಬ
ದಡ್ಡ ವೇದಾಂತಿಗಳ ಮಾತು ಸೊಗಸದಯ್ಯ ಎನಗೆ.
ಅದೇನು ಕಾರಣವೆಂದೊಡೆ :
ಆವುದಾನೊಂದು ಪಕ್ಷಿ ಉಭಯ ರೆಕ್ಕೆಯಿಂದೆ ಗಗನಕ್ಕೆ ಹಾರುವಂತೆ
ಅಂತರಂಗದಲ್ಲಿ ಸಮ್ಯಕ್ ಜ್ಞಾನ
ಬಹಿರಂಗದಲ್ಲಿ ಶಿವ ಸತ್‌ಕ್ರಿಯಾಸನ್ನಿ[೪]ಹಿತವಿಲ್ಲದೆ
ಪರವಸ್ತುವ ಕೂಡಬಾರದಾಗಿ.
ಇದು ಕಾರಣ,
ಸತ್ ಕ್ರಿಯಾ ಸಮ್ಯಕ್ ಜ್ಞಾನಸಂಪನ್ನರಾದ
ಮಹಾ ಶರಣರ ತೋರಿ ಬದುಕಿಸಯ್ಯ ಎನ್ನ?

ಅಖಂಡೇಶ್ವರಾ. ೫೪

---

೧. ದು (ಅ) ೨. ಹಿರಿಯ (ಅ)
೩. ಡ್ಡ (ಅ, ಕ) ೪. ನ್ನ (ಅ, ಬ, ಕ)

ಶೈವ ಸಿದ್ಧಾಂತಿಗಳೆಂಬ ಅಬದ್ಧ ಭವಿಗಳ ಮುಖವ ನೋಡಲಾಗದು.
ಅದೇನು ಕಾರಣವೆಂದೊಡೆ :
ಸಾಂಗೋಪಾಂಗ ಶುದ್ಧ ಶರೀರಿಯಾಗಿ
ಉನ್ನತಾಸನ [1]ಗದ್ದುಗೆ[1]ಯಲ್ಲಿ [2]ಕುಳಿತು[2] ಕಣ್ಣುಮುಚ್ಚಿ
ಅಂತರಂಗದಲ್ಲಿ ಪರಮಾತ್ಮನ ಕಳೆಯ ಧ್ಯಾನಿಸಿ
ಮನಸ್ಸಿನಲ್ಲಿ ಕಟ್ಟಿ ದೃಷ್ಟಿಗೆ ತಂದು
ಆ ದೃಷ್ಟಿಯಿಂದ ಪುಷ್ಪದಲ್ಲಿ ತುಂಬಿ
ಮೃತ್ತಿಕೆ ಪಾಷಾಣಾದಿ ನಾನಾ[3]ತರಹದ[3]
ಲಿಂಗಾಕಾರದ ಮೂರ್ತಿಯ ಸ್ಥಾಪಿಸಿ ದೇವರೆಂದು ಭಾವಿಸಿ
ಜಲ ಗಂಧ ಅಕ್ಷತೆ ಪುಷ್ಪ ಧೂಪ ದೀಪ ನೈವೇದ್ಯ ತಾಂಬೂಲಾದಿ
ಅಷ್ಟವಿಧಾರ್ಚನೆ ಷೋಡಶೋಪಚಾರಂಗಳನೆ ಮಾಡಿ
ಆ ಪೂಜಾಂತ್ಯ[4]ದಲ್ಲಿ ಎನ್ನ ಮಲಿನ ದೇಹದಲ್ಲಿ ನೀನು
ನಿರ್ಮಲವಾದ ವಸ್ತುವು ಇರಬೇಡ ಹೋಗೆಂದು
ತನ್ನ ದೇವರ ಬಾವಿ ಕೆರೆ ಹಳ್ಳ ಕೊಳ್ಳಾದಿ ಸ್ಥಾನಂಗಳಲ್ಲಿ ಹಾಕಿಬಿಡುವ
ಶಿವದ್ರೋಹಿಗಳಿಗೆ ಕುಂಭಿನಿಪಾತಕ ನಾಯಕನರಕ ತಪ್ಪದಯ್ಯ.
ಅಖಂಡೇಶ್ವರಾ. ೫೫

[5]ಷಡೀ[5]ಂದ್ರಿ ಸಪ್ತಧಾತುಗಳಲ್ಲಿ
ಸಂಭ್ರಮಿಸಿ ತುಂಬಿರ್ಪುದು ಒಂದೇ ಪರವಸ್ತುವೆಂದರಿಯರು.
ಷಡ್ಭೂತ ಷಟ್‌ಚಕ್ರಂಗಳಲ್ಲಿ
ಇಡಿದು ತುಂಬಿರ್ಪುದು ಒಂದೇ ಪರವಸ್ತುವೆಂದರಿಯರು.
ತನುತ್ರಯ ಮನತ್ರಯ ಭಾವತ್ರಯಂಗಳಲ್ಲಿ
ಭರಿತವಾಗಿರ್ಪುದು ಒಂದೇ ಪರವಸ್ತುವೆಂದರಿಯರು.
ಒಳಹೊರಗೆ ತೆರಹಿಲ್ಲದೆ
ಪರಿಪೂರ್ಣವಾಗಿ ತುಂಬಿರ್ಪುದು ಒಂದೇ ಪರವಸ್ತುವೆಂದರಿಯರು.

---

೧. ಗದ್ದುಗೆ (ಕ, ಇ, ಡ) ೨. ಕುಳ್ಳಿರ್ದು (ಅ, ಬ, ಕ)
೩. ತೆರದ (ಅ, ಬ, ಕ) ೪. ತರ (ಬ) ೫. ಷಡ್ವಿ (ಅ)

ವಿಪರೀತ ಭ್ರಾಂತಿ ಜ್ಞಾನದಿಂದೆ
ಒಳಗೆ ಬೇರೆ ಪರವಸ್ತು ಉಂಟೆಂದು
ಕಣ್ಣ ಮುಚ್ಚಿ ನೋಡಿ ಕಳವಳಗೊಂಡು
ಪ್ರಳಯಕ್ಕೊಳಗಾಗಿ ಹೋದವರ [೧]ಕಂಡು[೧]
ನಗುತಿರ್ಪ[೨]ನು ನಮ್ಮ ಅಖಂಡೇಶ್ವರನು. ೫೬

ಜಗದೊಳಹೊರಗೆಲ್ಲ ತೆರಹಿಲ್ಲದೆ
ಸಂಭ್ರಮಿಸಿ [೩]ತುಂಬಿಕೊಂಡಿರ್ಪ[೩] ಪರವಸ್ತುವ
ಆಹ್ವಾನಿಸಿ ಕರೆ[೪]ದು ವಿಸ[೫]ರ್ಜಿಸಿ ಬಿಡುವುದಕ್ಕೆ ಇಂಬುಂಟೇನೋ ಮರುಳೆ ?
ಇಂತೀ ಅಖಂಡ ಪರಿಪೂರ್ಣವಾದ ಪರಬ್ರಹ್ಮದ ನಿಲವನರಿಯದೆ
ಖಂಡಿತ ಬುದ್ಧಿಯಿಂದ ಕಲ್ಪಿಸಿ ಪೂಜಿಸಿ ಕರ್ಮದ ಬಲೆಯಲ್ಲಿ ಸಿಲ್ಕಿ
ಕಾಲಂಗೆ ಗುರಿಯಾಗಿ ಹೋದವರ ಕಂಡು ಬೆರಗಾದೆನಯ್ಯ
ಅಖಂಡೇಶ್ವರಾ. ೫೭

ಕುರುಹು ಉಂಟೇ ಮರುಳೆ ಲಿಂಗಕ್ಕೆ ?
ತೆರಹು ಉಂಟೇ ಮರುಳೆ ಲಿಂಗಕ್ಕೆ ?
ಎಲ್ಲೆಡೆಯೊಳು ಪರಿಪೂರ್ಣವಾದ
[೬]ಪರಾತ್ಪರಲಿಂಗದ[೬] ನಿಲವನರಿಯದೆ
ಹುಸಿಯನೆ ಕಲ್ಪಿಸಿ ಹುಸಿಯನೆ ಪೂಜಿಸಿ
ಹುಸಿಯ ಫಲಪದವನುಂಡು
ಹುಸಿಯಾಗಿ ಹೋದವರ ಕಂಡು
[೭]ನಸುನಗುತಿಪ್ಪನಯ್ಯಾ[೭] ನಮ್ಮ ಅಖಂಡೇಶ್ವರನು. ೫೮

ಅಷ್ಟಮೂರ್ತಿಗಳು ದೇವರೆಂಬ
ಭ್ರಷ್ಟಭವಿಗಳ ಮಾತು ಕೇಳಲಾಗದು.
ಅದೇನು ಕಾರಣವೆಂದೊಡೆ :

---

೧. ನೋಡಿ (ಅ,ಬ,ಕ) ೨. ರ್ದ (ಅ,ಬ,ಕ) ೩. ತುಂಬಿರ್ಪ (ಬ), ತುಂಬಿರ್ದ (ಕ), ತುಂಬಿರ್ಪುದು (ಅ) ೪. ರ (ಅ,ಬ,ಕ) ೫. ವ (ಅ) ೬. ಪರತತ್ವಲಿಂಗದಲ್ಲಿ (ಕ) ೭. ನಸುನಗುತಿರ್ದ (ಅ,ಬ,ಕ)

ಪೃಥ್ವಿ ದೇವರಾದಡೆ, ಅಪ್ಪುವಿನ ಪ್ರಳಯದಲ್ಲಿ ಕರಗು[೧]ವುದೆ ?[೧]
ಅಪ್ಪು ದೇವರಾದಡೆ, ಅಗ್ನಿಯ ಪ್ರಳಯದಲ್ಲಿ ಅರತು ಹೋಗುವುದೆ ?
ಅಗ್ನಿ ದೇವರಾದಡೆ, ವಾಯುವಿನ ಪ್ರಳಯದಲ್ಲಿ [೨]ಆರಿ[೨] ಹೋಗುವುದೆ ?
ವಾಯು ದೇವರಾದಡೆ, ಆಕಾಶ ಪ್ರಳಯದಲ್ಲಿ ಲಯವಪ್ಪುದೆ ?
ಆಕಾಶ ದೇವರಾದಡೆ, ಆತ್ಮನಲ್ಲಿ ಅಡಗಿ ಹೋಗುವುದೆ ?
ಆತ್ಮ ದೇವರಾದಡೆ, ದ್ವಂದ್ವ ಕರ್ಮಂಗಳನುಂಡು
ಜನನಮರಣಂಗಳಲ್ಲಿ ಬಂಧನವಡೆವನೆ ?
ಚಂದ್ರಸೂರ್ಯರು ದೇವರಾದಡೆ,
ಭವಬಂಧನದಲ್ಲಿ ಸಿಲ್ಕಿ ತೊಳಲಿ ಬಳಲುವರೆ ?
ಇದುಕಾರಣ ಇಂತೀ ಅಷ್ಟ ತನುಗಳು ಎಂತು ದೇವರೆಂಬೆನು !
ದೇವರ ದೇವ ಮಹಾದೇವ ಮಹಾಮಹಿಮ
ಎನ್ನೊಡೆಯ ಅಖಂಡೇಶ್ವರ ಒಬ್ಬನೆ ದೇವನಲ್ಲದೆ
ಉಳಿದವರೆಲ್ಲ ಹುಸಿಹುಸಿ ಎಂಬೆನು ನೋಡಾ ! ೫೯

ಪೃಥ್ವಿ ದೇವರೆಂಬೆನೆ ಪೃಥ್ವಿ ದೇವರಲ್ಲ.
ಅಪ್ಪು ದೇವರೆಂಬೆನೆ ಅಪ್ಪು ದೇವರಲ್ಲ.
ಅಗ್ನಿ ದೇವರೆಂಬೆನೆ ಅಗ್ನಿ ದೇವರಲ್ಲ.
ವಾಯು ದೇವರೆಂಬೆನೆ ವಾಯು ದೇವರಲ್ಲ.
ಆಕಾಶ ದೇವರೆಂಬೆನೆ ಆಕಾಶ ದೇವರಲ್ಲ.
ಆತ್ಮ ದೇವರೆಂಬೆನೆ ಆತ್ಮ ದೇವರಲ್ಲ.
ಸೂರ್ಯ ದೇವರೆಂಬೆನೆ ಸೂರ್ಯ ದೇವರಲ್ಲ.
ಚಂದ್ರ ದೇವರೆಂಬೆನೆ ಚಂದ್ರ ದೇವರಲ್ಲ.
ಅದೇನು ಕಾರಣವೆಂದೊಡೆ :
ಪೃಥ್ವಿ ಶಿವನ ಸದ್ಯೋಜಾತ ಮುಖ[೩]ದಲ್ಲಿ[೩] ಪುಟ್ಟಿತ್ತು.
ಅಪ್ಪು ಶಿವನ ವಾಮದೇವ ಮುಖ[೩]ದಲ್ಲಿ[೩] ಪುಟ್ಟಿತ್ತು.

---

೧. ಹಿಹುದೆ (ಅ) ೨. ಅರತು (ಅ) ೩. ದಿಂದ (ಕ)

೧ತೇಜ೧ ಶಿವನ ಅಘೋರ ಮುಖದಲ್ಲಿ ಪುಟ್ಟಿತ್ತು.
ವಾಯು ಶಿವನ ತತ್ಪುರುಷ ಮುಖದಲ್ಲಿ ಪುಟ್ಟಿತ್ತು.
ಆಕಾಶ ಶಿವನ ಈಶಾನ್ಯ ಮುಖದಲ್ಲಿ ಪುಟ್ಟಿತ್ತು.
ಆತ್ಮ ಶಿವನ ಗೋಪ್ಯ ಮುಖದಲ್ಲಿ ಪುಟ್ಟಿತ್ತು.
ಸೂರ್ಯ ಶಿವನ ನಯನದಲ್ಲಿ ಪುಟ್ಟಿತ್ತು.
ಚಂದ್ರ ಶಿವನ ಮನಸ್ಸಿನಲ್ಲಿ ಪುಟ್ಟಿತ್ತು.

" ಯತ್ ದೃಷ್ಟವಮ್ ತತ್ ನಷ್ಟವಮ್ "

ಎಂದು

ಇಂತೀ ಅಷ್ಟತನುಗಳಿಗೆ
ಹುಟ್ಟುಹೊಂದು ಉಂಟಾದ ಕಾರಣ
ಇವು ಕಲ್ಪಿತವೆಂದು ಕಳೆದು
ನೀನೊಬ್ಬನೇ ನಿತ್ಯ ಪರಿಪೂರ್ಣನೆಂದು ತಿಳಿದು ಉಳಿದೆನಯ್ಯಾ.

ಅಖಂಡೇಶ್ವರಾ. ೬೦

ಶರಣಭರಿತ ಶಿವನು ಶಿವಭರಿತ ಶರಣನೆಂಬುದು ನಿಜವಲ್ಲದೆ
ಜಗಭರಿತ ಶಿವನು ಶಿವಭರಿತ ಜಗವೆಂಬುದು ಹುಸಿನೋಡಾ !
ಅದೇನು ಕಾರಣವೆಂದೊಡೆ :
ಜಗಕ್ಕೆ ಪ್ರಳಯ ಮಹಾಪ್ರಳಯಂಗಳುಂಟು.
ಇದು ಕಾರಣ, ಪ್ರಳಯಾತೀತ ಶರಣಸನ್ನಿ೨ಹಿತ ನಮ್ಮ ಅಖಂಡೇಶ್ವರ ! ೬೧

ಸರ್ವಗತ ಶಿವನೆಂದು ಹೇಳುವ
ಮರುಳ ಮಾನವರ ಮಾತ ಕೇಳಲಾಗದು !
ಅದೆಂತೆಂದೊಡೆ :
ಸರ್ವ೩ಜೀವರು೩ಗಳಂತೆ
ವನಿತಾದಿ ವಿಷಯಪ್ರಪಂಚಿನಲ್ಲಿ ಮಗ್ನ೪ವಾಗಿರ್ಪ೪ನೆ ಶಿವನು ?

---

೧. ಅಗ್ನಿ (ಅ, ಕ) ೨. ಸ್ನ (ಅ)
೩. ಜೀವಿ (ಅ) ೪. ವಪ್ಪ (ಬ)

ಸರ್ವ [1]ಜೀವರು[1]ಗಳಂತೆ
ತಾಪತ್ರಯಾಗ್ನಿಯಲ್ಲಿ ನೊಂದು ಬೆಂದು ಕಂದಿ ಕುಂದುವನೆ ಶಿವನು ?
ಸರ್ವ [1]ಜೀವರು[1]ಗಳಂತೆ
ಪುಣ್ಯಪಾಪ ಸುಖದುಃಖ ಸ್ವರ್ಗನರಕಂಗಳೆಂಬ
ದ್ವಂದ್ವ ಕರ್ಮಂಗಳ ಹೊದ್ದಿರ್ಪನೆ ಶಿವನು ?
ಸರ್ವ [1]ಜೀವರು[1]ಗಳಂತೆ
[2]ಉತ್ಪತ್ತಿ[2] ಸ್ಥಿತಿ ಪ್ರಳಯಂಗಳೆಂಬ ಕಷ್ಟ ಬಂಧನಂಗಳಲ್ಲಿ ಸಿಲ್ಕಿ
ಹೊದಕುಳಿಗೊಂಬನೆ ಶಿವನು ?
ಇಂತೀ ಭೇದವನರಿಯದೆ ಸರ್ವಗತ ಶಿವನೆಂದು ನುಡಿದ
ಕಡುಪಾತಕ ಜಡಜೀವಿಗಳ ಎನಗೊಮ್ಮೆ ತೋರದಿರಯ್ಯ !
ಅಖಂಡೇಶ್ವರಾ. ೬೨

ಪೃಥ್ವಿ ಆಕಾಶ ಮಧ್ಯದಲ್ಲಿ [3]ಉತ್ಪತ್ತಿ[3]ಯಾದ
ಸಕಲ ಪ್ರಾಣಿಗಳ ಶಿವನೆಂದು ಭಾವಿಸಲಾಗದು.
ಅದೇನು ಕಾರಣವೆಂದೊಡೆ :
ಆ ಸಕಲ ಪ್ರಾಣಿಗಳು ಶಿವನಾದಡೆ
ಮದಮತ್ಸರಂಗಳಿಂದೆ
[4]ಒಂದನೊಂದು[4] ಕೊಂದು
ಕೂಗಿ ತಿಂದು ತೇಗಲೇತಕೊ ?
ಆ ಸಕಲ ಪ್ರಾಣಿಗಳು ಶಿವನಾದಡೆ
ಜಾತಿವರ್ಣಾಶ್ರಮ ಕುಲಗೋತ್ರ ನಾಮಸೀಮೆ
ಬಂದ ಬಟ್ಟೆಗೆ ಬಡಿದಾಡಲೇತಕೊ ?
ಆ ಸಕಲ ಪ್ರಾಣಿಗಳು ಶಿವನಾದಡೆ
ಹಮ್ಮು ಬಿಮ್ಮು ಗರ್ವ ಅಹಂಕಾರ ಹೆಮ್ಮೆ ಹಿರಿತನಕೆ
ಹೊಡೆದಾಡಿ ಮಡಿದು ಹೋಗಲೇತಕೊ ?

---

೧. ಜೀವಿ (ಅ) ೨. ಉತ್ಪತ್ಯ (ಬ, ಕ) ೩. ಉತ್ಪತ್ಯವಾ (ಅ,ಬ,ಕ)
೪. ಒಂದರನೊಂದು (ಅ, ಬ, ಕ)

ಆ ಸಕಲ ಪ್ರಾಣಿಗಳು ಶಿವನಾದಡೆ
ಮಲತ್ರಯಂಗಳ ಬಲೆಯಲ್ಲಿ ಸಿಲ್ಕಿ
ಭವಭವಂಗಳಲ್ಲಿ ತೊಳಲಿ ಬಳಲಿ ಬೆಂಡಾಗಲೇತಕೊ ?
ಇದುಕಾರಣ,
ಅನಾದಿ ಸಂಸಿದ್ಧವಾದ ಪರಮ ಜಂಗಮಲಿಂಗವೇ ಶಿವನಲ್ಲದೆ
ಭವಭವಂಗಳಲ್ಲಿ ಸತ್ತು ಹುಟ್ಟುವ ಸಕಲ ಪ್ರಾಣಿಗಳ ಶಿವನೆಂದಡೆ
ಅಘೋರನರಕ ತಪ್ಪದಯ್ಯ !

ಅಖಂಡೇಶ್ವರಾ. ೬೩

ಸರ್ವ ಜಗದಲ್ಲಿ ಶಿವನಿಲ್ಲವೆಂದಡೆ
ಆ ಜಗವು ಶಿವನಿಂದಲ್ಲದೆ ಬೇರೆ ತೋರಲರಿಯದಾಗಿ
ಪದ್ಮಪತ್ರಜಲದಂತೆ ವಿಶ್ವಪರಿಪೂರ್ಣನಾಗಿ
ಹೊದ್ದಿಯೂ ಹೊದ್ದದಿರ್ಪನು ನಮ್ಮ ಅಖಂಡೇಶ್ವರ. ೬೪

ಜಗವಾಗಬಲ್ಲ ನೋಡಿರೊ ನಮ್ಮ ಶಿವನು.
ಜಗವಾಗಲರಿಯದೆ ಇರಬಲ್ಲ ನೋಡಿರೊ ನಮ್ಮ ಶಿವನು.
ಅನಂತ ಕೋಟಿ ಬ್ರಹ್ಮಾಂಡಗಳ
ನಿಮಿಷ ಮಾತ್ರದಲ್ಲಿ ಹುಟ್ಟಿಸಬಲ್ಲ ನೋಡಿರೊ ನಮ್ಮ ಶಿವನು.
ಆ ಬ್ರಹ್ಮಾಂಡಗಳ
ನಿಮಿಷ ಮಾತ್ರದಲ್ಲಿ ಕೆಡಿಸಬಲ್ಲ ನೋಡಿರೊ ನಮ್ಮ ಶಿವನು.
ಇಂತಪ್ಪ ಮಹಾದೇವನ ಘನವನರಿಯದೆ
[೧]ಬರಿದ[೧] ದೇವರು ಉಂಟೆಂದು [೨]ಬೊಗಳುವ[೨]
ಭವಭಾರಿಗಳ ಮುಖವ ನೋಡಲಾಗದಯ್ಯ!

ಅಖಂಡೇಶ್ವರಾ. ೬೫

---

೧. ಬೇರೆ (ಅ, ಬ, ಕ)
೨. ಬಳಲುವ (ಇ)

ಬ್ರಹ್ಮ ದೇವನಾದಡೆ
ಹಮ್ಮಿನಿಂದ ಹೋದ ತಲೆಯ
ಗಮ್ಮನೆ ಪಡೆಯಲರಿಯನೇತಕೊ ?[1]
ವಿಷ್ಣು ದೇವನಾದಡೆ
ಸುಟ್ಟು ಹೋದ ಮನ್ಮಥನ ಪ್ರಾಣವ
ನೆಟ್ಟನೆ ಕೊಡಲರಿಯನೇತಕೊ ?[1]
ಇದನರಿಯದೆ,
ಹುಟ್ಟಿಸುವಾತ ಬ್ರಹ್ಮ ರಕ್ಷಿಸುವಾತ ವಿಷ್ಣುವೆಂದು ನುಡಿವ
ಭ್ರಷ್ಟ ವಿಪ್ರರೆಂಬ ಹೊಲೆಮನದ ಹಾರುವರ
ಮೆಟ್ಟಿ ಮೆಟ್ಟಿ ತುಳಿತುಳಿದು
ಹೊಟ್ಟೆ ಹರಿಯಲೊದೆಯೆಂದಾತ ನಮ್ಮ ಅಖಂಡೇಶ್ವರನು. ೬೬

ಗುರುಭಕ್ತರಾದವರು
ತ್ರಿಕಾಲದಲ್ಲಿ ಹರಸ್ಮರಣೆಯಲ್ಲದೆ ಹರಿಯೆಂದು ನುಡಿಯಲಾಗದು.
ಹರಿ ಶಬ್ದವ ಕೇಳಲಾಗದು. ಹರಿಯ ರೂಪವ ನೋಡಲಾಗದು.
ಅದೇನು ಕಾರಣವೆಂದೊಡೆ :
ಪೂರ್ಣಾಯುಷ್ಯವು,ವಿಮಲಮತಿಯು
ಸತ್‌ಕೀರ್ತಿಯು, ಮಹಾಬಲವು,
ಕೆಟ್ಟು ಹೋಹುತ್ತಿಹುದು ನೋಡಾ!
ಅದೆಂತೆಂದೊಡೆ : ಬ್ರಹ್ಮಾಂಡ ಪುರಾಣೇ-

"ನ ಪ್ರದೋಷೇ ಹರಿಂ ಪಶ್ಯೇತ್ ಯದಿ ಪಶ್ಯೇತ್ ಪ್ರಮಾದತಃ ।
ಚತ್ವಾರಿ ತಸ್ಯ ನಶ್ಯಂತಿ ಆಯುಃ ಪ್ರಜ್ಞಾ ಯಶೋ ಬಲಮ್ ॥"

ಎಂದುದಾಗಿ

ಸತ್ತು ಹುಟ್ಟುವ ಹರಿಗೆ ಇನ್ನೆತ್ತಣ ದೇವತ್ವ ಹೇಳಾ!
ಅಖಂಡೇಶ್ವರಾ. ೬೭

---

೧. ನದೇಕೋ (ಅ), ನದ್ಯಾತಕೋ (ಬ, ಕ)

ಹರಿ ಹರಗೆ ಸರಿಯೆಂಬ
ಎಲೆ ನೀಚ ಪರವಾದಿಗಳಿರಾ ನೀವು ಕೇಳಿರೊ.
ಹರಿ ಹತ್ತು ಭವದಲ್ಲಿ ಹುಟ್ಟಿ ಬಂದು
ನಮ್ಮ ಹರನ ಶ್ರೀ ಚರಣವನರ್ಚಿಸಿ ವರವ ಪಡೆದನಲ್ಲದೆ
ನಮ್ಮ ಹರನು ಆವ ಭವದಲ್ಲಿ ಹುಟ್ಟಿದ ?
ಆವ ದೇವರ ಪೂಜಿಸಿ ಆವ ಫಲಪದವ ಪಡೆದನು ?
ಬಲ್ಲರೆ ನೀವು ಹೇಳಿರೊ ?
ಇದನರಿಯದೆ ಹರಿ ಹರಗೆ ಸರಿಯೆಂಬ ಪರವಾದಿಗಳ ಬಾಯ
ಕೆರಹಿನಟ್ಟೆಯಲಿ ಹೊಯ್ದಲ್ಲದೆ ಎನ್ನ ಸಿಟ್ಟು ಮಾಣದು ನೋಡಾ!
ಅಖಂಡೇಶ್ವರಾ. ೬೮

ಇಕ್ಕಿದೆನು ಮುಂಡಿಗೆಯ
ಹರಿಕುಲದ ವಿಪ್ರರು [೧]ಬೆಕ್ಕನೆ[೧] ಬೆರಗಾಗುವಂತೆ!
ಇಕ್ಕಿದೆನು ಮುಂಡಿಗೆಯ
ಸೊಕ್ಕಿದ ರಕ್ಕಸರ ಸಂಹರಿಸಿದ ಶಿವನೇ ಅಧಿಕನೆಂದು!
ಇಕ್ಕಿದೆನು ಮುಂಡಿಗೆಯ
ಹರಿಯಜಸುರಾಸುರರೆಲ್ಲ ಹರನ ಆಳುಗಳೆಂದು!
ಇಕ್ಕಿದೆನು ಮುಂಡಿಗೆಯ ದಿಕ್ಕು ದಿಕ್ಕಿನೊಳಗೆ
ಅಖಂಡೇಶ್ವರನೆಂಬ ಮುಕ್ಕಣ್ಣ ಪರಶಿವನೇ ಘನ ಘನವೆಂದು! ೬೯

ಇಕ್ಕಿದೆನು ಮುಂಡಿಗೆಯ ದೇವರದೇವನೆಂದು!
ಇಕ್ಕಿದೆನು ಮುಂಡಿಗೆಯ ದೇವಶಿಖಾಮಣಿಯೆಂದು!
ಇಕ್ಕಿದೆನು ಮುಂಡಿಗೆಯ ದೇವದೇವೇಶ್ವರನೆಂದು!
ಇಕ್ಕಿದೆನು ಮುಂಡಿಗೆಯ ಭಾವಜವೈರಿಯೆಂದು!
ಇಕ್ಕಿದೆನು ಮುಂಡಿಗೆಯ ಭಾಳಲೋಚನನೆಂದು!

---

೧. ಬೆದರಿ (ಅ)

ಇಕ್ಕಿದೆನು ಮುಂಡಿಗೆಯ-ಜಗದ ವಲ್ಲಭನೆಂದು!
ಇಕ್ಕಿದೆನು ಮುಂಡಿಗೆಯ ಜಂಗುಳಿ ದೈವದ ಗಂಡ ಅಖಂಡೇಶ್ವರನೆಂದು! ೭೦

ಅಜ ಹರಿ ಸುರರೆಲ್ಲ ಆವ ದೇವನ ಶ್ರೀ ಚರಣವನರ್ಚಿಸಿ
ಫಲಪದವ ಪಡೆದರು ತಿಳಿದು ನೋಡಿರೋ ಮಾಯಾವಾದಿಗಳು ನೀವೆಲ್ಲ.
ಮನು ಮುನಿಗಳು ಮರುಳ ತಾಂಡವರು ಅಷ್ಟದಿಕ್ಪಾಲಕರೆಲ್ಲ
ಆವ ದೇವನ ಶ್ರೀ ಚರಣವನರ್ಚಿಸಿ ಫಲಪದವ ಪಡೆದರು
ತಿಳಿದು ನೋಡಿರೋ ಮಾಯಾವಾದಿಗಳು ನೀವೆಲ್ಲ.
ಕಾಲ ಕಾಮ ದಕ್ಷಾದಿಗಳು ಆವ ದೇವನಿಂದ ಅಳಿದು ಹೋದರು
ತಿಳಿದು ನೋಡಿರೋ ಮಾಯಾವಾದಿಗಳು ನೀವೆಲ್ಲ.
ವೇದ ಶಾಸ್ತ್ರ ಆಗಮ ಪುರಾಣ ಶ್ರುತಿ ಸ್ಮೃತಿಗಳೆಲ್ಲ
ಆವ ದೇವನ ಹೊಗಳುತಿರ್ಪುವು [1]ಹೇಳಿರೋ[1] ಮಾಯಾವಾದಿಗಳು ನೀವೆಲ್ಲ.
ಇಂತೀ ಭೇದವ ಕೇಳಿ ಕಂಡು ತಿಳಿದು ನಂಬಲರಿಯದೆ
ದಿಂಡೆಯ ಮತದ ಡಂಭಕ ಮೂಳ ಹೊಲೆಯರಂತಿರಲಿ
[2]ಕಾಕು ದೈವದ[2] ಗಂಡ ಲೋಕಪತಿ ಏಕೋ ದೇವ
ನಮ್ಮ ಅಖಂಡೇಶ್ವರನಲ್ಲದೆ ಅನ್ಯದೈವವಿಲ್ಲವೆಂದು
ಮುಂಡಿಗೆಯನಿಕ್ಕಿ ಹೊಯ್ವೆನು ಡಂಗುರವ ಮೂಜಗವರಿವಂತೆ! ೭೧

ವೇದಂಗಳು ನಿಮ್ಮ ಭೇದಿಸಲರಿಯವು ನೋಡಾ!
ಆಗಮಂಗಳು ನಿಮ್ಮ ಹೊಗಳಲರಿಯವು ನೋಡಾ!
ಶ್ರುತಿತತಿಗಳು ನಿಮ್ಮ ಸ್ತುತಿಸಲರಿಯವು ನೋಡಾ!
ಶಾಸ್ತ್ರಂಗಳು ನಿಮ್ಮ ಸಾಧಿಸಲರಿಯವು ನೋಡಾ!
ಅಖಂಡೇಶ್ವರಾ. ೭೨

ಎನ್ನ ನಡೆ ನುಡಿ ಚೈತನ್ಯವೇ ನೀವೆಂದರಿದೆ
ಎನ್ನ ಒಡಲೇಂದ್ರಿಯಂಗಳೆಲ್ಲ ನಿಮ್ಮವೆಂದರಿದೆ.

---

೧. ತಿಳಿದು ನೋಡಿರೋ (ಅ,ಬ,ಕ)
೨. ಕಾಳುದೇವರ (ಬ,ಕ)

